# ಕಾವ್ಯ ಸುಧಾ

(ಕವನ ಸಂಕಲನ)

**ಪಂಡಿತ್ ಸುಧಾಕರ ಚತುರ್ವೇದಿ**

ಪ್ರಕಾಶಕರು :

**ಸುಮಾ ಪ್ರಕಾಶನ**

286-ಸಿ, 10ನೇ ಮುಖ್ಯ ರಸ್ತೆ,
5ನೇ ಬಡಾವಣೆ, ಜಯನಗರ,
ಬೆಂಗಳೂರು - 560 041

**'KAVYA SUDHA'** a Collection of poems by Pandit Sudhakar Chaturvedi published by Suma Prakashana, No. 286-C, 10th Main, 5th Block, Jayanagar, Bangalore - 560 041



ಪುಟಗಳು : 96

ಬೆಲೆ : ರೂ. 50/-

ಮುಖ ಪುಟದ ಚಿತ್ರ : ಮೋಹನ್ ವೆರ್ಣೇಕರ್

ಮೊದಲನೇ ಮುದ್ರಣ : 2003

ಪ್ರಕಾಶಕರು : ಸುಮಾ ಪ್ರಕಾಶನ
286-ಸಿ, 10ನೇ ಮುಖ್ಯ ರಸ್ತೆ
5ನೇ ಬಡಾವಣೆ, ಜಯನಗರ
ಬೆಂಗಳೂರು - 560 041
☎ : 6552975

ಮುದ್ರಕರು : ಯುಗಾಂತರ ಮುದ್ರಣಾಲಯ
33, 1ನೇ ಮುಖ್ಯರಸ್ತೆ
ಚಾಮರಾಜಪೇಟೆ, ಬೆಂಗಳೂರು-560 018
☎ : 6672832

## ಗುರು ದೇವರಿಗೆ ಸಮರ್ಪಣೆ

ಸಮಸ್ತ ಮಾನವ ಸಮಾಜಕ್ಕೆ ನಗೆ ತರಲು ದುಡಿದ
ಪೂಜ್ಯ ಸ್ವಾಮೀ ಶ್ರದ್ಧಾನಂದ ಸರಸ್ವತಿಗಳ ಪುನೀತ ಸಂಸ್ಮರಣದಲ್ಲಿ



ಸ್ವಾಮಿ ಶ್ರದ್ಧಾನಂದ ಗುರುಜೀ

# ಮುನ್ನುಡಿ

ವೇದವಾಙ್ಮಯದ ಧೀರಗಂಭೀರ ಅಜರಾಮರ ವಾಣಿಯನ್ನು ಕನ್ನಡನಾಡಿನಲ್ಲೆಲ್ಲ ಮೊಳಗಿಸಿದ ಮಹತಿ ಪಂಡಿತ ಸುಧಾಕರ ಚತುರ್ವೇದಿಯವರದ್ದು. ವೇದಸುಧೆಗೆ ಆಕರ ಅವರು ಸಂಸ್ಕೃತಿಸುಧೆಗೆ ಮೇಲೋಗರ. ಸುದೀರ್ಘವಾದ ತಮ್ಮ ಬದುಕಿನುದ್ದಕ್ಕೂ ವೇದಪುರುಷನ ಕೈಂಕರ್ಯವನ್ನು ಎಡೆಬಿಡದೆ, ದಣಿವರಿಯದೆ, ಅಂಜದೆ, ಅಳುಕದೆ ಕೈಗೊಂಡು ಕೃತಾರ್ಥರಾಗಿರುವವರು; ಸೋಲಿಗೆ, ನೋವಿಗೆ ಬಾಗದೆ ಬಳುಕದೆ ನೆಟ್ಟಗೆ ತಲೆಯೆತ್ತಿ, ನಿಂತವರು. ತಮ್ಮ ಉದಾತ್ತವಾದ, ಅಸದೃಶವಾದ ನಿಲುವನ್ನು ಇತರರಿಗೆ ಆದರ್ಶವಾಗಿ ತೋರಿಸುವಂಥ ದುಡಿಮೆ ಅವರದ್ದು ತಮ್ಮೆಲ್ಲ ಬರಹ, ಮಾತು, ಆಲೋಚನೆ, ಸಂಭಾಷಣೆ, ಕೆಲಸ, ಕಾರ್ಯಗಳಲ್ಲೆಲ್ಲ ಧೈರ್ಯ, ಸ್ಥೈರ್ಯ, ಗಾಂಭೀರ್ಯ, ಗೌರವ, ನೀತಿ ನಯಗಳನ್ನೇ ಕಾಣಿಸುತ್ತ ಮರ್ಯಾದಾಪುರುಷರಾಗಿಯೇ ಇರುವವರು.

ಇವರು ವೇದಪ್ರಚಾರಕರು ಮಾತ್ರ ಅಲ್ಲ, ಶುದ್ಧವೈದಿಕ ಸಂಸ್ಕೃತಿಯ ಪ್ರತಿಪಾದಕರು ಮಾತ್ರ ಅಲ್ಲ; ಹೆಸರಾಂತ ಚಿಂತಕರು, ಭಾವುಕ ಕವಿವರರು. ಎಷ್ಟು ನಿಷ್ಕೃಷ್ಟವಾದ ವೈಯಾಕರಣಿಯೋ ಅಷ್ಟೇ ಮನೋಜ್ಞವಾದ ಕಲ್ಪನಾಚತುರರು. ವೇದಕ್ಕೆ ಒಲಿದ ವಾಗ್ವಿಲಾಸವಾದರೂ ಯುಕ್ತಿಯುಕ್ತವಾದ ಚಿಂತನೆಗೆ ಹೆಸರಾದವರು. ಮಾಗಿದ ಮನಸ್ಸು, ಹರೆಯದ ಹೃದಯ. ಅವರ ಮಾತಿನ ಮೋಡಿ ಪ್ರವಚನಗಳಲ್ಲಿ ತೋರಿಕೊಳ್ಳುವಂತೆಯೇ ಬರಹಗಳಲ್ಲೂ ಮೂಡಿಕೊಂಡು ಬರುತ್ತದೆ. ಅವರು ಕಂಡರಿಸುವ ಕಲ್ಪನೆಗಳ ಕಾವು, ಬಳಸುವ ಪದಗಳ ಮೋಜು, ಚಿಮ್ಮಿಸುವ ನಗೆಯಲೆಗೆಳುಬ್ಬರ, ಧ್ವನಿಸುವ ಆದರ್ಶದ ಹೊಳಹು, ಮಾಡುವ ವಾದದ ವೈಖರಿ ಇವೆಲ್ಲವನ್ನು ಅವರ ಗದ್ಯ-ಪದ್ಯಗಳಲ್ಲಿ ಧಾರಾಳವಾಗಿ ಕಾಣಬಹುದು.

ಇವೆಲ್ಲ ಗುಣಗಳನ್ನೊಳಗೊಂಡ ಅವರ ಕವಿತೆಗಳ ಒಂದು ಸಂಕಲನ ನಮ್ಮೆದುರು ಮೈದಳೆದು ನಿಂತಿದೆ. ಕವಿಯೆಂದರೆ ಋಷಿಯ ಕಳೆಯುಳ್ಳವನೇ ಅಲ್ಲವೆ ? 'ನಾನೃಷಿಃ ಕುರುತೇ ಕಾವ್ಯಂ' ಎಂದು ನಮ್ಮ ಅಲಂಕಾರಿಕರೇ ಹೇಳಲಿಲ್ಲವೆ ? ಋಷಿಯೆಂದರೆ ಕಾಣ್ಕೆಯುಳ್ಳವನು ('ಋಷಿಶ್ಚ ಕಲದರ್ಶನಾತ್'). ಕಾಣ್ಕೆಯೆಂದರೆ ಎಲ್ಲ ಕಾಲಕ್ಕೂ ಒಪ್ಪಾದ, ಎಲ್ಲರಿಗೂ ಸಮ್ಮತವಾದ, ಆದರೆ ಇಂದ್ರಿಯಗೋಚರವಲ್ಲದ, ಗಂಭೀರವಾದ ಸತ್ಯವನ್ನು ಕಂಡುಕೊಳ್ಳುವುದು; ಮನದಾಳದಲ್ಲಿ ಅದನ್ನು ಅನುಭವಿಸುವುದು. ಸ್ವಚ್ಛವಾದ ದರ್ಶನವಿದ್ದರೂ, ಹೃದ್ಯವಾದ ವರ್ಣನಾಶಕ್ತಿಯಿರದಿದ್ದರೆ ಕವಿಯಾಗಲಾರ ಎಂದು ಭಟ್ಟತೋತ ಹೇಳಿದ. ಋಷಿಯಾದ ಮಾತ್ರಕ್ಕೆ ಕವಿಯಾಗಲಾರನೆಂದರ್ಥ. ನಮ್ಮಪಂಡಿತ ಸುಧಾಕರ ಚತುರ್ವೇದಿಯವರು ಋಷಿಯೂ ಹೌದು, ಕವಿಯೂ ಹೌದು. ಅವರ ಕವಿತೆಯಲ್ಲಿ ಕಾಣ್ಕೆ ಕಾಣುತ್ತದೆ; ಕಾಣ್ಕೆಯಲ್ಲಿ ವರ್ಣನೆ ಕಾಣುತ್ತದೆ.

ವೇದಋಷಿಗಳೊಂದಿಗೆ ಒಳಗಣ ಒಡನಾಟ ದಿನದಿನವೂ, ಬಾಳಿನುದ್ದಕ್ಕೂ. ಅವರ ಕಾಣ್ಕೆ-ಕನಸುಗಳೊಂದಿಗೆ ಉತ್ಸಾಹದಿಂದ, ತನ್ಮಯತೆಯಿಂದ ಪಾಲ್ಗೊಳ್ಳುವರು. ಹೀಗಿರದೆ, ವೇದದ ಅರ್ಥ, ಇಂಗಿತ, ತಾತ್ಪರ್ಯ ತಿಳಿಯುವುದಾದರೂ ಹೇಗೆ ? 'ನ ಪ್ರತ್ಯಕ್ಷಮಸ್ತಿ ಅನೃಷೇರತಪಸೋ ವಾ' ಎಂಬ ಮಾತೇ ಇದೆಯಲ್ಲ ? ಪಂಡಿತ ಸುಧಾಕರರು ಋಷಿಗಳೊಡನೆ ಋಷಿ, ತಪಸ್ವಿಗಳೊಡನೆ ತಪಸ್ವಿ. ಸ್ವಾಧ್ಯಾಯ ತಪಸ್ಸು ಅವರದ್ದು. ಮಂತ್ರದರ್ಶನದ ಸ್ವಾರಸ್ಯವನ್ನು ಗ್ರಹಿಸುವ ಸಾಮರ್ಥ್ಯದೊಂದಿಗೆ ಆಸಾಮರ್ಥ್ಯವನ್ನು ಮಾತಿನಲ್ಲಿ ಕವಿತೆಯಲ್ಲಿ ತಿಳಿಯಪಡಿಸುವ ಅವರ ಶಕ್ತಿಯೂ ಬಹುಕಾಲದಿಂದ ಕನ್ನಡ ಜನತೆಗೆ ಪರಿಚಿತವಾದದ್ದೇ. ಅವರ ಕವಿತೆಗಳಲ್ಲಿ ವೇದಮಂತ್ರಗಳ ಆಶಯ-ಆದೇಶಗಳು ಪ್ರತಿಬಿಂಬಿತವಾಗಿದೆ. ತಮ್ಮದೇ ಆದ ಪ್ರತಿಕ್ರಿಯೆ-ನಿಲುವುಗಳನ್ನೂ ಕವಿತೆಗಳಲ್ಲಿ ಅಡಗಿಸಿದ್ದಾರೆ. ಛಂದೋರೂಪವಾಗಿದಿದ್ದರೆ ಅವರ ಕವಿತೆಗಳೇ ಮಂತ್ರಗಳಾಗುತ್ತಿದ್ದುವು!

ಇಂಥ ಶುಚಿ-ರುಚಿ ಪೂರ್ಣವಾದ ಕವಿತೆಗಳ ಸಂಕಲನ ಇದು. ಛಂತೋರೂಪವಿಲ್ಲದಿದ್ದರೂ ಕಾವ್ಯಲಕ್ಷಣಗಳು (ದ್ವಿತೀಯಾಕ್ಷರಪ್ರಾಸ, ಅಂತ್ಯಾಕ್ಷರಪ್ರಾಸ, ವೃತ್ತಭೇದ, ಅಲಂಕಾರ ಮೊದಲಾದುವು) ಇಲ್ಲಿ ಕಾಣದೆ ಇಲ್ಲ. ಮತ್ತೆ ಗೇಯವಾಗಿಯೂ ಇವೆ. ಹದವರಿತು, ರುಚಿಹಿಡಿದು, ರಾಗ ಪಡಿದೊಡೆದು ಹಾಡಿದರೆ ಸುಶ್ರಾವ್ಯವಾಗಿಯೂ ಇರ ಬಲ್ಲುವು. ಪದಬಂಧದಲ್ಲಿ ಮಾಧುರ್ಯ ಪದಪ್ರಯೋಗದಲ್ಲಿ ಪ್ರಗಲ್ಬತೆ ಎರಡನ್ನೂ ಕಾಣಬಹುದು. ಕೆಲವು ಕವಿತೆಗಳು ವೇದಮಂತ್ರಗಳ ಛಾಯೆಯೇ ಆಗಿದೆ; ಕೆಲವು ಪ್ರಶ್ನೋಪಜ್ಞವಾಗಿದೆ; ಮತ್ತೆ ಕೆಲವು ಕವಿಯ ಒಡಲೊಳಗಣ ಕಸವಿಸಿಯನ್ನ ಹೊಸಕಾಣಿಸುವಂಥವು. ಕವಿಯ ಅನಿಸಿಕೆಗಳು ಹಲವು ಕವಿತೆಗಳಲ್ಲಿ ಮೈದಾಳಿ ನಿಂತಿವೆ. ಕವಿಯು ಬಳಸಿಕೊಂಡಿರುವ ಭಿತ್ತಿಯಲ್ಲಿ ವ್ಯಕ್ತಿ, ಸಮಾಜ, ರಾಜಕಾರಣ, ಅಧ್ಯಾತ್ಮ ನೀತಿ ಶಿಕ್ಷಣ, ಧರ್ಮ, ಮತ, ಯೋಗ, ಧ್ಯಾನ ಎಲ್ಲವೂ ಸೇರಿಕೊಂಡಿವೆ. ಪರಿಪೂರ್ಣವಾದ ವ್ಯಕ್ತಿತ್ವ ಪಂಡಿತ ಸುಧಾಕರರದ್ದು; ಅವರ ಅಭಿವ್ಯಕ್ತಿ ಈ ಕವಿತೆಗಳಲ್ಲಿ ಆಗಿದೆ.

ಹೀಗಾಗಿ ವೇದಕ್ಕಿಂತ ವಿಶಾಲವಾದ ಬದುಕಿನ ಭೂಮಿಕೆ ಇಲ್ಲ ಸಿದ್ಧವಾಗಿದೆ. ವೇದಕಾಲಕ್ಕಿಂತ ದೂರ ಸರಿದ ಕಾಲ ನಮ್ಮದು. ನಮ್ಮ ಸಮಸ್ಯೆಗಳು ತೀರ ಲೌಕಿಕವಾದುವು, ಅಂದಿನ ಋಷಿಗಳ ಎಣಿಕೆಯಲ್ಲಿ ಕ್ಷುಲ್ಲಕವೆನಿಸುವಂಥವು. ಮನಃಕಷಾಯಗಳ ಕೆಸರು ಕೆರೆಗಟ್ಟೆ ನಿಂತಿರುವ ಪರಿಸರ ಇಂದಿನದು. ನೀತಿಗೆಟ್ಟ ನಿಲುವು ವ್ಯಕ್ತಿಯಿಂದ ಸಮುದಾಯಕ್ಕೆ, ಸಮುದಾಯದಿಂದ ವ್ಯಕ್ತಿಗೆ ಸಂಕ್ರಮಿಸಿ, ಇಂದ್ರ-ವೃತ್ರರ ನಡುವಣ ವಿರಸವನ್ನು ನೆನಪಿಗೆತರುತ್ತದೆ. ನಾಸ್ತಿಕತೆಯ ಒಳಸುಳಿ ಹೊರ ಹರಿದು ಹರಡಿ ಕೊಳ್ಳುತ್ತಿರುವ ಕಾಲ;



ಶೂನ್ಯವಾದದ ವಿಷಗಾಳಿ ಎತ್ತೆತ್ತಲೂ ಚಿತ್ರರಗೊಳ್ಳುತ್ತಿರುವ ಕಾಲ. ಅಂಜುಕುಳಿಗಳ ಅಂಜಿಕೆಯನ್ನು ಮುಗಿಲೆತ್ತರಕ್ಕೆ ಒಯ್ಯುವ ಯುಗ. ಕಡಿಮೆ ದುಡಿದು ಬಹಳಗಳಿಪ ಆಸುರೀ ವೃತ್ತಿ ನಲಿದಾಡುವುದೊಂದೆಡೆ; ಕಂಡ ಕಂಡ ಕಲ್ಲುಗಳೆದುರು ದೈನ್ಯದಿಂದ ಬೇಡುವುದಿನ್ನೊಂದೆಡೆ. ಬಯಕೆಗಳು ಬಾನಗಲ ಹರಡಿ ಇನ್ನೂ ಬಾಯಿಚಾಚುತ್ತಿರುವುದು ಮತ್ತೊಂದೆಡೆ. ವಿಜ್ಞಾನ-ತಂತ್ರಜ್ಞಾನ-ಸಮರ-ಸನ್ನಾಹ-ಅಧರ್ಮವಿಧರ್ಮವಿಪ್ಲವ ಎಲ್ಲವೂ ಕಲಬೆರೆತು ಮನುಷ್ಯನಿಗೆ ಕುತ್ತನ್ನು ತಂದಿರುವ ಈ ಯುಗಧರ್ಮದಲ್ಲಿ ಬಳಲಿ ಬೇಸತ್ತವನಿಗೆ ಕವಿಯದೇನಾದರೂ ಸಂದೇಶವಿದೆಯೆ ?

ಇದೆಯೆಂದು ಈ ಸಂಕಲನ ಸಾರಿ ಹೇಳುತ್ತಲಿದೆ. ಕಾಲ ಎಂಥದೇ ಇರಲಿ, ಪರಿಸರವೆಂತೇ ಇರಲಿ ವೇದದ ಮಾತು ಎಲ್ಲೆಲ್ಲಿಯೂ ಎಂದೆಂದಿಗೂ ಸಲ್ಲುವುದು. ವೇದದ ವೇದತ್ವ ಅದೇ. ಈ ಕಾರಣದಿಂದಲೇ ಕವಿ ಕೇಳುತ್ತಾನೆ - "ದೇವ, ನಿನ್ನ ವೇದ ಕಾವ್ಯಕಾವುದಾಗ ಬಹುದು ಸಾಟಿ ?" ವೇದದ ಸಂದೇಶವೇ ಕವಿಯ ಸಂದೇಶ. ಬಾಳುವೆಯಲ್ಲಿ ಸಂಶಯ, ಶೂನ್ಯವಾದ, ನಾಸ್ತಿಕತೆ, ಭಯ, ಅಲಸಿಕೆ, ದುಗುಡಗಳಿಗೆಡೆಯಿರಬಾರದು. ಉತ್ಸಾಹ, ಉದ್ಯಮ, ಉದ್ಯೋಗಶೀಲತೆ, ಆನಂದ ಇವೇ ಬದುಕನ್ನು ಹದಗೊಳಿಸುವ, ಹಸನುಮಾಡುವ, ಹಸಿರಾಗಿಸುವ ಸಾಧನೆಗಳು. ಕಾಲ ಕೆಟ್ಟಿತೆಂದು ಕೈಕಟ್ಟಿ ಕೂತರೆ, ವಿಧಿಯ ಆಟವೆಂದು ಮಮ್ಮಲ ಮರುಗಿ ಮಲಗಿದರೆ, ಸಾವಿಗಂಜಿ ಸೆಟೆದು ನಿಂತರೆ ವೇದ ಮೆಚ್ಚದು. ಇದನ್ನು ಕವಿ ಬಗೆಬಗೆಯಾಗಿ ಬಿತ್ತರಿಸುತ್ತಾರೆ. ಬದುಕಿನಲ್ಲಿರಬೇಕಾದ ಕೆಚ್ಚೆದೆಯ ಕಾವನ್ನು ಹಾಡಿ ಹೊಗಳುತ್ತಾರೆ.

ವೇದವು ಮನುಷ್ಯನನ್ನು ಜಾತಿ, ಮತ, ಲಿಂಗ, ವಯ ಭೇದವಿಲ್ಲದೆ ದೇವಪುತ್ರನೆಂದೂ, ಅಮರಪಥಸಂಚಾರಿಯೆಂದೂ, ಸದ್ಯಾತ್ರಾಪಥಸಂಚಾರಿಯೆಂದೂ, ಭರತ ನಂದನನೆಂದೂ ಅನಂತದ ಯಾತ್ರಿಕನೆಂದೂ ಬಣ್ಣಿಸಿರುವುದನ್ನು ಕವಿ ಗುರುತಿಸಿದ್ದಾರೆ. ಹೀಗಿರುವಾಗ ಕಾಲವೇನು ಕೇಡನ್ನು ಮಾಡೀತು ? 'ಇರುವನೆಲೆ ನಿಯಾಮಕ' ? ಎಲ್ಲವನ್ನು ನಿಯಮಿಸುವ ದೇವನೊಬ್ಬನಿರಲಾಗಿ ಮನುಷ್ಯನಿಗೆ ಏತರ ಅಂಜಿಕೆ ? 'ಗಡಗಡನೆ ನಡುಗುತಿಹೆ ಏತಕೆ?' ಎಂದು ಕವಿಯ ಪ್ರಶ್ನೆ. ದೇವನನ್ನು ನಂಬದಿದ್ದೊಡೆ ಎಲ್ಲದರಿಂದಲೂ ಅಂಜಿಕೆಯೆ !

'ದೇವನನ್ನು ಗುರುತಿಸಲ್ಲೆ
ಜೀವಪಥವಿದೆ ಸರಿ'

ಈ ದೇವನನ್ನು ಅಲ್ಲಲ್ಲಿ ಸುಳಿದಾಡಿ, ಅತ್ತಿತ್ತ ತಡುಕಾಡಿ ಆಯಾಸ ಪಡುವ ಕಾರಣವಿರದು

'ಎಲ್ಲೆಲ್ಲಿ ಹುಡುಕಿದೆನೋ ನಿನ್ನ ನಾ ಹೃದ್ವಾಸ
ಎಲ್ಲಿಯೂ ಸಿಗಲಿಲ್ಲ ಬರಿಧೆ ಆಯಾಸ!'

ಗುಡಿಗುಂಡಾರಗಳಲ್ಲಿ, ಪ್ರತಿಮೆಪುತ್ಥಳಿಗಳಲ್ಲಿ, ತೀರ್ಥಕ್ಷೇತ್ರಗಳಲ್ಲಿ, ದೇವ ಸಿಗಲಾರನು; ಅರಿತವರ ಒಡಲೊಳಗೇ ನೆಲೆಸಿರುವವನ್ನು ಬೇರೆಲ್ಲಿ ಕಂಡುಕೊಳ್ಳುವುದು ? 'ಈಶನೊಬ್ಬನೆದುರು ಬಾಗಿ' 'ಅಂಜದೆ ಮುಂದರಿ'. ವಿಧಿಯೆಂದು ನಂಬಿ ದೀನನಾಗಿದ್ದರೆ, ಈಶನನ್ನು ನಂಬದಂತೆಯೇ ಸರಿ ಕವಿ ಹೇಳುತ್ತಾರೆ -

'ವಿಧಿಗೆ ಬಾರದೆ
ಸದನುರಾಗದೆ ಮುಂದೆ ನಡೆವುದಗತ್ಯವೈ'

ಇನ್ನು, ಸಾವೆಂಬುದು ಸರ್ವತ್ರ ಸಿದ್ಧವಾದುದು. ಅದಕಂಜದೆ ಇರುವವರು ಯಾರು ? ನಮ್ಮ ಕವಿ ಅದಕ್ಕೂ ಅಂಜುವುದಿಲ್ಲ.

'ಸಾವಿಗೆ ನಮಿಪೆ, ಆದರಂಜೆ ನಿನಗೆ!'

ಎನ್ನುತ್ತಾರೆ. ಸಾವಿನದೇನು ಹಿರಿಮೆ ? ಎಲ್ಲಕ್ಕೂ ನಿಯಾಮಕನೊಬ್ಬನಿಲ್ಲವೆ ? ಬದುಕು ಬಂಗಾರವಾಗಲು ದುಡಿಮೆಯೇ ದಾರಿ ಎಂದು ನಂಬಿದವರು ಕವಿ. ದುಡಿಯುವಾಗಲೂ ನಲಿವು ಇರಬೇಕೆಂದು ಅವರ ಆಶಯ-

'ದುಡಿದು ತಿನ್ನು ನಲಿದು ತಿನ್ನು
ನಿಜಕು ಭಕ್ತನಾಗುವೆ'

ದುಡಿಮೆಗೆ ಅಂಜಬಾರದು, ಅಳುಕಬಾರದು, ಹಿಂಜರಿಯಬಾರದು, ಬೇಸರಿಸಬಾರದು-

'ದುಡಿಮೆಗಂಜುವ ವೃತ್ತಿಯಿಂ ನೀ
ದೂರವೇ ಸರಿಯೈ'

'ಏಸು ಯತ್ನ ಬೇಕೋ ಮಾಡಿ
ಹಾಡಿಬಿಡುವೆ ವಿಜಯರಾಗ'



ಬದುಕಿಗೆ ಬೆಳಕಾಗುವುದು, ದುಡಿಮೆಗೆ ದೀಪವಾಗುವುದು ನಗು-

'ಬಾಳುವುದು ತಾ ತಪ್ಪದಿರೆ
ನಗುನಗುತ ಬಾಳಲು ಬಾರದೆ ?''

ಜನರ ಪಾಲಿಗೆ ಸಾಮಾನ್ಯವಾಗಿ ಬರುವುದು ಏಕಾಂತರೋದನ, ಬಾಷ್ಪಪ್ರಣೋದನ, ದುಃಖ-ಪ್ರಲಾಪನ, ಚಿತ್ರಪ್ರತಾಪನ ಎಂದೆಲ್ಲ ಕವಿ ಪಟ್ಟಿಮಾಡಿ, ಇವೆಲ್ಲ ಕೂಡದು, 'ನಗುತ ನಗಿಸೀ ಲೋಕವ' ಎಂದು ಸೂಚಿಸುತ್ತಾರೆ. ಈಶ್ವರನ ಅರಿವೆಂಬುದೇ ಅಮೃತ, ಅದೇ ಸುಧೆ.

'ಸುಧೆಯೆ ಹರಿದು ವಸುಧೆ ನಗಲಿ
ನನ್ನ ಕರೆಯನಾಲಿಸು'

ಇದು ಕವಿಯ ಕರೆ. ಋಗ್ವೇದ ಮಂತ್ರದ ಭಾವಾನುವಾದವೊಂದರಲ್ಲಿ ಈಶ್ವರನು ವಿಚಿತ್ರಚಿತ್ರಕಾರನೆಂದೂ ವಿಶ್ವಮೋದನನೆಂದೂ ಬಣ್ಣಿಸಿ, ಈಶ್ವರನ ಕೃಪೆಯಿಂದಾಗಿ 'ನಮಗೆ ಬೇಡರೋದನ' ಎಂದು ಪ್ರಾರ್ಥಿಸುತ್ತಾರೆ. ಇನ್ನೊಂದು ಕವಿತೆಯಲ್ಲಿ 'ಬಿದ್ದರೂ ನಗು' ಎಂದು ಹೇಳುತ್ತಾರೆ.

ಕೆಲವು ಕವಿತೆಗಳಲ್ಲಿ 'ಮಾಸದಂಥ ನಗೆಯನೆನ್ನ ಮೋಗಗೆ ಪೂಸ ತೋರಿಸು' ಎಂದು ದೇವರನ್ನು ಬೇಡುತ್ತಾರೆ. ಅಧ್ಯಾತ್ಮ ಸಾಧನೆಯ ಮರ್ಮಗಳನ್ನು ಸರಳವಾಗಿ ತಿಳಿಯ ಹೇಳುತ್ತಾರೆ. ಮೊದಲು ಆತ್ಮಶೋಧನ ಮಾಡಿಕೊಳ್ಳಬೇಕೆಂದೂ ಅನಂತರ ತತ್ವಬೋಧನೆಗೆ ತೊಡಗಬೇಕೆಂದು ಕವಿಯ ಮಾತುಗಳನ್ನಾಡಿದ್ದಾರೆ. ಆತ್ಮಶೋಧನೆಗೆ ಮೊದಲೇ ತತ್ವಬೋಧನೆಗಿಳಿದರೆ ಅದು ಸರಿಯಾಗದು. ಇನ್ನು

'ಪಾಪ ಹೀನ ಶುದ್ಧಕರ್ಮ ಒಂದೆ
ಆತ್ಮಶುದ್ಧಿ ಮರ್ಮ'

ಜೀವವೆಂಬ ರಥಕ್ಕೆ ತ್ರಿವಿಧಬಂಧನವಂತೆ; ದೇವಋಣ, ಪಿತೃಋಣ, ಆಚಾರ್ಯಋಣವೆಂಬುವು. ಮೂರು ಚಕ್ರಗಳಂತೆ; ಜ್ಞಾನ, ಕರ್ಮ, ಉಪಾಸನೆ ಇವು. ಮೂರು ಆವರಣಗಳಂತೆ - ಮನಃಶುದ್ಧಿ, ವಾಕ್‌ಶುದ್ಧಿ, ತನುಶುದ್ಧಿ.

'ಮದಂತರ್ಯಾಮಿ'ಯೂ 'ಸರ್ವದರ್ಶಿ'ಯೂ ಆದ ಈಶ್ವರನು ಜ್ಞಾನಗಮ್ಯ, ಧ್ಯಾನಗಮ್ಯ, ಮೌನಗಮ್ಯ. ಜಗತ್ತೆಂಬ ರಂಗಸ್ಥಳದಲ್ಲಿ. ಬದುಕೆಂಬ ವೇದಿಕೆಯ ಮೇಲೆ 'ಅವನೆ ನರ್ತಕ, ಸತ್‌ಪ್ರವರ್ತಕ' ಸ್ಥೂಲವೆಂಬುದು ಬಾಹ್ಯ, ಅದನ್ನು ಬಿಟ್ಟು ಸೂಕ್ಷ್ಮವೆಂಬ ಕಾರಣಪ್ರಕೃತಿ, ಸೂಕ್ಷ್ಮತರವೆಂಬ ಜೀವ, ಸೂಕ್ಷ್ಮತಮನೆನಸಿದ ಈಶ್ವರ ಈ ನೆಲೆಗಳನ್ನ ಅಪೇಕ್ಷಿಸಬೇಕು. ಪರಮಾತ್ಮನೇ ತನ್ನ ಆತ್ಮವೆಂಬ ದೃಢಭಾವನೆಯಿಂದ ಸ್ವಾತ್ಮತಾರ್ಪಣ ಮಾಡಬೇಕು. ಇದು ಆತ್ಮವಿಕಾಸದ ದಾರಿ-

'ಬೇಡುವ ದೈನ್ಯವ ಮೂಲೆಗೆ ತಳ್ಳುತ
ಮಾಡಿಕೋ ಆತ್ಮ ವಿಕಾಸವನು'

ಹೀಗೆ ಈ ಕವಿತಾಸಂಕಲನ ರೋಚಕವಾಗಿಯೂ ಇದೆ, ಬೋಧಕವಾಗಿಯೂ ಇದೆ. ಇದನ್ನು ತಮ್ಮ ಗುರುಗಳಾದ ಸ್ವಾಮಿ ಶ್ರದ್ಧಾನಂದರ ನೆನಹಿಗೆ ಒಪ್ಪಿಸಿರುವುದೂ ಉಚಿತವಾಗಿಯೇ ಇದೆ. ಗುರುಗಳದ್ದು 'ಬಿದ್ದವರು ಸಹ ಎದ್ದು ನಿಲಬಹುದೆಂಬ ತತ್ವದ ಬೆಳಕನ್ನು' ಬೆಳಗಿದ ಹಿರಿಮೆ. ಈ ನುಡಿನಮನದೊಂದಿಗೆ ಸಂಕಲನ ಮೊದಲಾಗುತ್ತದೆ.

ಪಂಡಿತ ಸುಧಾಕರ ಚತುರ್ವೇದಿಯವರ ಕಾವ್ಯಕೌತುಕವು ನಮ್ಮೆಲ್ಲರಿಗೆ ದಾರಿದೀಪವಾಗಬಲ್ಲುದು. ಒಂದೊಂದು ಕವಿತೆಯೂ ಸೂಕ್ತಸ್ವರೂಪದ್ದು; ಒಂದೊಂದು ಕವಿತೆಯ ನುಡಿಗಳು ಮಂತ್ರಗಳು. ಇಡೀ ಸಂಕಲನವೊಂದು ಸಂಹಿತೆಯೇ. ಇದೆಲ್ಲದರ ಋಷಿ ಪಂಡಿತ ಸುಧಾಕರ ಚತುರ್ವೇದಿಯವರು. ಇದೊಂದು ಕನ್ನಡವೇದ. ಲೋಕಕ್ಕೆ ನೆಮ್ಮದಿಯನ್ನೊದಗಿಸಬಹುದಾದ ಗುಣ ಇದರಲ್ಲಿದೆ. ಇದನ್ನು ಬರಮಾಡಿಕೊಳ್ಳುವ ಹೊಣೆ ನಮ್ಮದು.

**ಸಾ.ಕೃ. ರಾಮಚಂದ್ರ ರಾವ್**

ವಿದ್ಯಾಲಂಕಾರ, ಶಾಸ್ತ್ರಚೂಡಾಮಣಿ, ಸಂಗೀತಕಲಾರತ್ನ
ವಾಚಸ್ಪತಿ ಪ್ರಾ|| ಸಾ. ಕೃ. ರಾಮಚಂದ್ರರಾವ್
305, 6ನೇ ಕ್ರಾಸ್, 5ನೇ ಬ್ಲಾಕ್
ಜಯನಗರ, ಬೆಂಗಳೂರು - 560 011



# ಕವಿ ನುಡಿ

ವೇದ-ಉಪನಿಷತ್ತು ಆದಿ ಮಹದ್ಗ್ರಂಥಗಳ ಅಧ್ಯಯನದ ನಂತರವೂ ಕಾವ್ಯರಚನೆಯ ಕಡೆಗೆ ನಿಮ್ಮ ಮನಸ್ಸು ಹೊರಳಿದುದೇಕೆ ? ಆ ಮೂಲಕ ಜನಸಾಮಾನ್ಯರಲ್ಲಿ ವೇದಗಳನ್ನು ಹೆಚ್ಚಾಗಿ ಹರಡ ಬಹುದೆಂಬ ಅಭಿಪ್ರಾಯವೇ ಎಂದು ಹಲವರು ಪ್ರಶ್ನಿಸುತ್ತಾರೆ. ಪ್ರಶ್ನೆ ಸುಲಭ; ಉತ್ತರ ಅಷ್ಟೇನೂ ಸುಲಭವಲ್ಲ.

ನಾಲ್ಕೂ ವೇದಗಳಲ್ಲಿರುವ 27 ಸಾವಿರಕ್ಕೂ ಮೀರಿದ, ನಾನಾ ಛಂದಸ್ಸುಗಳಲ್ಲಿರುವ ಮಂತ್ರಗಳನ್ನೆಲ್ಲಾ ಕನ್ನಡ ಕವಿತೆಗಳಲ್ಲಿ ಪರಿವರ್ತಿಸಿ ಜನತೆಗೆ ಒಪ್ಪಿಸೇನು ಎಂದು ಹೇಳಿ ಕೊಳ್ಳಬಲ್ಲ ಮತ್ತೊಬ್ಬ 'ತಿರುವಳ್ಳುವರ್' ಬರಬೇಕಾಗಬಹುದೇನೋ ? ಬಂದರೂ ತಿರುವಳ್ಳುವರ್ ಆಗಲಿ, ಪಂಪಮಹಾಕವಿಯಾಗಲಿ, ನಾಗಚಂದ್ರನಾಗಲಿ, ರಾಘವಾಂಕನಾಗಲಿ, ತೊರವೆಯ ನರಹರಿಯಾಗಲಿ, ಸಾಹಸಭೀಮ ವಿಜಯದ ರನ್ನನಾಗಲಿ ತಾವಾರಿಸಿಕೊಂಡ ಮೂಲಕ್ಕೆ ಸರಿಯಾಗುವಂತಹ ರಚನೆ ಮಾಡಿಲ್ಲ. ಹೆಚ್ಚೇನು - ಕೋಳಿವಾಡ ಗ್ರಾಮದ ಶ್ಯಾನುಭಾಗ ನಾರಣಪ್ಪ (ಕುಮಾರವ್ಯಾಸ) ಹಾಗೂ ತಿಮ್ಮಣ್ಣ ಕವಿಗಳು ಕೂಡ ತಮ್ಮ ತಮ್ಮ ಮೂಲಗಳ 'ಆತ್ಮ'ವನ್ನು ಸ್ಪರ್ಶಿಸಿಲ್ಲವೆಂದೇ ನನಗೆ ತೋರುತ್ತದೆ ಎಂದ ಮೇಲೆ ಕವನಗಳ ಮೂಲಕ ಎಲ್ಲವೇದಗಳನ್ನು ಮುಟ್ಟಬಲ್ಲನೆಂಬ ಉತ್ಸಾಹ ನನಗಿಲ್ಲ.

ಕವನದ ಕಡೆಗೆ ನನ್ನ ಕಣ್ಣನ್ನು ಹೊರಳಿಸದವಳು ನನ್ನ ಚಿಕ್ಕಕ್ಕ ಪದ್ಮಾವತಿಬಾಯಿ. ಕನ್ನಡ ಸಂಸ್ಕೃತ ಕಾವ್ಯಗಳನ್ನು ನಾನು ರೋಗಸ್ಥನಾಗಿದ್ದಾಗಲೂ ಮಧುರ ಮಧುರವಾಗಿ ಓದಿ ಎಳೆತನದಲ್ಲೇ ಕಾವ್ಯಾಭಿರುಚಿ ಮೂಡಿಸಿದ ಮೊದಲಗುರು, ಅವಳಿಗೆ ಯಾವ ಮಾತುಗಳಿಂದ ವಂದನೆಸಲ್ಲಿಸಲಿ ?

ಹೀಗಂಟಿತು ಕವಿತಾ ಮೋಹ, ವೇದಾಧ್ಯಯನಾನಂತರ ಕವಿತೆ ಹೊರಮುಖದಿಂದ ಒಳಮುಖಕ್ಕಿಳಿಯಿತು. ವೇದ ಮಂತ್ರಗಳ ಮನನ ಮಾಡಿ ಭಾವಗ್ರಹಿಸಿ, ಕನ್ನಡದಲ್ಲಿ ಕನ್ನಡ ಮಕ್ಕಳ ನಾಲಿಗೆಯ ಮೇಲೆ ಇಂದಲ್ಲ ನಾಳೆ ಸುಳಿಯಬೇಕೆಂಬ ದೂರದ ಆಸೆಯಿಟ್ಟುಕೊಂಡು ಬರೆಯಹತ್ತಿದೆ. 'ರಬ್ಬರ್' ಛಂದಸ್ಸಿನಲ್ಲಿ ನನಗೆ ನಂಬಿಕೆಯಿಲ್ಲದೆ ಗಣಗಳಿಂದ ಕೂಡಿದ ಶಬ್ದಗಳ ಬಳಕೆ ಮತ್ತು ಅಂತಿಮಾಕ್ಷರ ಪ್ರಾಸ ಇವುಗಳನ್ನು ಬಳಸಿಕೊಂಡು ಬರೆಯಹತ್ತಿದೆ.

ಮಂತ್ರಗಳ ಸಾರವನ್ನು ಅಂತರಂಗಕ್ಕಿಳಿಸಿಕೊಂಡು, ಅವುಗಳ ಭಾವನೆಗಳನ್ನು ಪದಗಳಿಗೆ ಇಳಿಸಲು, ರಸವನ್ನುಳಿಸಲು ಯತ್ನಿಸಿದ್ದೇನೆ. ಇನ್ನು ಓದುಗರ ಗ್ರಹಣಶಕ್ತಿ, ಆಸಕ್ತಿಗಳೇ ಈ ಹೊತ್ತಿಗೆಯ ಬೆಲೆಯಾದೀತು.

# ಸ್ವಾಮಿ ಶ್ರದ್ಧಾನಂದರ ನೆನಹಿನಲ್ಲಿ

ಬಿದ್ದ ದೇಶಕೆ ಕದ್ದ ಧರ್ಮಕೆ
ಸದ್ದಳಿದ ಆ ನಮ್ಮ ಮಾತಿಗೆ ।
ಎದ್ದು ನಿಲ್ಲುವ ನವ್ಯ ಚೇತನ
ತುಂಬಿದ್ಯೆ ಅಂಜದೆಯೆ ಖಾತಿಗೆ ॥

ಬಿದ್ದರೇನುದ್ಧಾರಭವವನ
ನಿಲಿಪ ತಳಹದಿ ನೆಲದ ಕೆಳಗಿದೆ ।
ಬಿದ್ದವರು ಸಹ ಎದ್ದು ನಿಲಬಹು
ದೆಂಬ ತತ್ವದ ಬೆಳಕ ಬೆಳಗಿದೆ ॥

ಓ ಹುತಾತ್ಮನೆ ! ಆಹತಾತ್ಮನೆ !
ನೀನು ಛಲ ಬಿಡಲಿಲ್ಲವೈ ಸಲೆ
ದೇಹ ಬೀಳುವ ತನಕ ಧುರದಲಿ
ನೀನು ಬಲಗೆಡಲಿಲ್ಲವೈ ಸಲೆ ॥

ಓಹೋ ! ದಾನಿಗಳೆನಿಬರನೊ ಜಗ
ಯುಗಯುಗದಿ ಕಂಡಿಹುದು ಜಾಣನೆ
ದಾಹಗೊಂಡವಗೆದೆಯ ರಕ್ತವ –
ನೆರೆದ ಸಾಹಸಿ ಯಾರೊ ಕಾಣೆನೆ ॥

ಸರ್ವಮೇಧಾಧ್ವರವ ರಚಿಸಿದ
ಗುರು ದಯಾನಂದರಿಗೆ ಸೋಲುತ ।
ಸರ್ವವನು ಪರಹಿತಕೆ ಸಲ್ಲಿಸಿ
ಬೆಳಗಿದ್ಯೆ ಗುರುವನ್ನೆ ಹೋಲುತ ॥

ಸಲ್ಲಿಸಲಿ ನಾನೇನ ಶ್ರದ್ಧಾನಂದ
ಯತಿವರ ನಿನ್ನ ಪಾದಕೆ ।
ಸೊಲ್ಲಿದೆನ್ನದು ಹೊಂದಬಲ್ಲುದೆ
ನಿನ್ನ ಕಡುಗಲಿ ಸಿಂಹನಾದಕೆ ॥

(ಡಿಸೆಂಬರ್ ೨೩ರಂದು ರಾಷ್ಟ್ರದ, ಧರ್ಮದ ಸೇವೆಗಾಗಿ ಬಲಿದಾನ ಮಾಡಿದ ವೀರಸನ್ಯಾಸಿಯ ಪುಣ್ಯಸ್ಮರಣೆಯಲ್ಲಿ ನುಡಿನಮನ).

# ಮಾನವೀಯ ಸಂದೇಶ

ಮೂಢ ಮಾನವ! ಮೋಹಮಾಯಾಗ್ರಸ್ತ ನೀನಾಗಿದ್ದೊಡೆ ।
ಗೂಢ ತತ್ವದ ಗಹನರೂಪವನೆಂದು ಸಾಧಿಸಲಾಗದು ॥ ೧ ॥

ಚಿತ್ತಶುದ್ಧಿಯನಿತ್ತು ಮೃತ್ಯುವನ್ನೊತ್ತಿಸಾಗುವ ಸತ್ತ್ವವ ।
ಬಿತ್ತರದ ಬಾಹ್ಯಾರ್ಥ ಪೂಜಾ ಪಾಠದಿಂ ತರಲಾಗದು ॥ ೨ ॥

ಅಂತರಂಗದನಂಗಸಂಗತರಂಗದಿಂ ಗತಿಭಂಗದಿ ।
ನಿಂತಿರಲು ಬಹಿರಂಗ ಸಿಂಗರದಿಂ ಗರಿಮೆ ನಿನಗಾಗದು ॥ ೩ ॥

ಸಂಚಯಿಸೆ ನೀ ಚಂಚಲಾರ್ಥವ ಮಿಂಚ ವಂಚನೆಗೆಳಸಿದೆ ।
ಹೊಂಚುತಿಹ ನಿನಗಿಂ ಚತುರನೊಳಗವನ ವಂಚಿಸಲಾಗದು ॥ ೪ ॥

ನೊಂದವರ ಸಂತೈಸಲೊಲ್ಲದ ಪರರ ನಿಂದಿಪ ನಾಲಿಗೆ ।
ಸಂದಪುದೆ ಪ್ರಭುಭಜನೆಗಾವಂ ಬರವನವನಲಿ ಸಾಗದು ॥ ೫ ॥

ಜೀವ ಸೇವೆಗೆ ಕೊಡದ ಕೈಯಿಂ ದೇವಮಂದಿರಕೀವೆಯಾ ।
ದೇವಗೀಯುವ ಧೀರ! ನಿನ್ನೀ ದಂಭ ಗುರಿಯನು ತಾಗದು ॥ ೬ ॥

ಭೋಗ ಭಾರಕೆ ಬಾಳು ಕೆಳಕೆಯೇ ಕುಸಿವುದೈ ಕ್ಷಣ ಕ್ಷಣ ಸಹ ।
ತ್ಯಾಗದಿಂ ಮೇಲೇರು ಮೋಕ್ಷವು ನಿನ್ನ ಮಟ್ಟಕೆ ಬಾಗದು ॥ ೭ ॥

ದೀನ ದುಃಖಿತ ಸೇವೆ ಮಾಡುತ ಕಣ್ಣ ಮುಚ್ಚಿದರಾಗದು ।
ಹೀನ ಭಾವನೆಯಳಿದೊಡಲ್ಲದೆ ಧ್ಯಾನ ಕರಗತವಾಗದು ॥ ೮ ॥

ಯಾವರಂ ವಾಙ್ಮನೋಮಾಲಿನ್ಯ ತೀರದೋ ಆವರಂ ।
ದೈವಿಕಾನಂದಾಮಲಸುಧಾಸ್ವಾದ ಜೀವನಕಾಗದು ॥ ೯ ॥



# ಉದ್ಬೋಧನ

ಮಾನವತಾಘನಭಾವ ಜನಕ ಮನ ।
ನೀ ನವನವತಾಭಾವ ತಳೆ
ದಾನವತಾಸಂಹಾರ ವಿಚಾರ ವಿ-
ಧಾನ ಚತುರ ನೀ ಸಾವ ಕಳೆ ॥ ೧ ॥

ಅಂಧಕಾರವಿದೆ ತಂದ ಭಾರವಿದೆ
ಮುಂದೆ ವಿಗಡ ಕಾಂತಾರವಿದೆ
ಎಂದು ಕುಗ್ಗಿ ನೀ ಹಿಂದೆ ಸರಿಯದಿರು
ಮುಂದೆ ನುಗ್ಗು ಆಧಾರವಿದೆ. ॥ ೨ ॥

ಹಳ್ಳವು ಕೊಳ್ಳವು ಕಲ್ಲುಮುಳ್ಳುಗಳು
ಒಳ್ಳೆಯ ಹಾದಿಗೆ ಹತ್ತಿಹವು
ಅಳ್ಳೆದೆ ಜೀವಗಳುಳಿದೀ ಮಾರ್ಗವ
ಸುಳ್ಳು ಹಾದಿಯಲಿ ಸತ್ತಿಹವು ॥ ೩ ॥

ಅಂಜದೆ ಮುಂದರಿ ಸೌಖ್ಯವ ನೀ ಮರೆ
ನಂಜನು ಸಹ ಕುಡಿಯುತ ಸಾಗು
ಅಂಜದ ಧೀರಗೆ ನಂಜೇ ಸುಧೆಯೈ
ಹಿಂಜರಿಯದೆ ಗುರಿಯನು ತಾಗು ॥ ೪ ॥

ಸುಖವನು ಕೋರುವ ನರನಿಗೆ ಸೌಖ್ಯ ವಿ-
ಮುಖವೇ; ಸ್ವಪ್ನವದುಲ್ಲಾಸ
ಸುಖದಾ ನೆತ್ತಿಯ ಮೆಟ್ಟುವ ಧೀರನ
ಪ್ರಖರ ತೇಜಕಾ ಸುಖ ದಾಸ ॥ ೫ ॥

ಸದ್ಯಾತ್ರಾಪಥ ಸಂಚಾರಿಯೆ ಅನ-
ವದ್ಯ ಜ್ಯೋತಿಯದೋ ದೂರ
ಹೃದ್ಯ ಭಾವನಾದೀಪವ ಬೆಳಗಲು
ಉದ್ಯತನಾಗುತ ನಡೆ ಶೂರ ॥ ೬ ॥

---

ಹೇ ಸೋಮ ! ರಸಯುಕ್ತ ಅನ್ನವು ಯಜಮಾನನಿಗೆ ಪ್ರಾಪ್ತವಾಗಲಿ

# ಉನ್ಮತ್ತ ಗೀತ

ಧುಮುಕುವೆನೀ ಸಂರಂಭದ ಸಂಗರ
ತುಮುಲ ನಿನಾದವತೀ ನದಿಗೆ ।
ಹಿಮಗಿರಿಸದೃಶೋತ್ತುಂಗ ವೀಚಿಗಳ
ನಿಮಿಷದೆ ದೂಡುವೆ ನೀ ಬದಿಗೆ ॥

ಗಗನದ ಚರ್ಮವ ಸರಸರ ಸುಲಿವೆನು
ನದಗಳನಬ್ಧಿಗೆ ತೂರುವೆನು ।
ಬಿಗುವಿಂ ವಾರಧಿಗಳನುಂ ಹೀರುವೆ
ದಗೆಗೇ ಕೂರಸಿಯೂರುವೆನು ॥

ಘೋರಾನ್ಯಾಯದ ಭೀಕರ ದೃಶ್ಯವ
ಸೈರಿಸೆನಸದನುಸಾರಿಣಿಯ ।
ಗೌರವದಲಿ ನರಜೀವಿಸನಾದರೆ
ತೂರುವೆ ಶೂನ್ಯಕೆ ಧಾರಿಣಿಯ ॥

ಬೆಚ್ಚನೆ ಮನೆಯಲಿ ಕುಳ್ಳಿರದೇತಕೆ
ನುಚ್ಚಾಗುವೆ ಎಂದೆನ್ನುವೆಯ ।
ಹುಚ್ಚನೆನ್ನುವಿಯ ಪೆಚ್ಚನೆನ್ನುವಿಯ
ಕೆಚ್ಚಿಗೆ ನುಗ್ಗದಿರೆನ್ನುವಿಯ ॥

ಹುಚ್ಚನಾಗಲಿಕೆ ಹುಟ್ಟಿದ ಹುಚ್ಚನ
ಹುಚ್ಚಿಗೆ ಮರುಗುವೆಯಾ ಮಿತ್ರ ?
ಬೆಚ್ಚನೆ ಕುಳ್ಳಿಹ ಭಾಗ್ಯದ ಹುಚ್ಚನು
ಮೆಚ್ಚನು ಅದು ಮಿಥ್ಯಾಚಿತ್ರ ॥

ತಡೆಯದೆ ಮುಂದಕೆ ಹೋಗಲು ನನ್ನನು
ಬಿಡುಸಖ ! ನಾನಂಜಿಕೆಕಾಣೆ ।
ಒಡಲಿನ ಮಡಲಿನ ಕಿಡಿಯಂದುಗುಡದ
ಕಡಲನೆ ಕಿಡಿಸದೆ ನಾ ಮಾಣೆ ॥



# ಹೇ ಯಶೋಧನ ! ನಗುತ ನಗಿಸೀ ಲೋಕವ !

ಏತಕೀ ಮಮತಾಪ್ರಮೋದನ, ಏತಕೀ ಏಕಾಂತರೋದನ ?
ಮಾತುಮಾತಿಗೆ ಜೀವಸಂಪ್ರಿಯ ! ಏತಕೀ ಬಾಷ್ಪಪ್ರಣೋದನ ?

೧

ಬಾಳಿನಲಿ ಹಲ ಏರುಪೇರುಗಳಿಹವು ನಿಜವದ ಬಲ್ಲೆನು
ಏಳುವುದು ಸಟೆ, ಬೀಳುವುದು ದಿಟ – ಎಂದರದ ನಾನೊಲ್ಲೆನು
ಅತ್ತೊ ನಕ್ಕೋ ಬಿದ್ದೊ ಎದ್ದೋ ಮುಂದರಿಯಬೇಕಾಗಿದೆ –
ಬಿತ್ತುದುದ ತಾಕಿತ್ತು ತಿನಲೇಬೇಕು – ಎನ್ನುವುದಾಗಿದೆ –
ಏತಕೀ ದುಃಖಪ್ರಲಾಪನ ಈ ನಿರಾಶಾತೋದಮಾಪನ ?
ಮಾತು ಮಾತಿಗೆ ಜೀವಸಂಪ್ರಿಯ ! ಏತಕೀ ಚಿತ್ತಪ್ರತಾಪನ ?

೨

ಬಾಳುವುದು ತಾ ತಪ್ಪದಿರೆ ನಗುನಗುತ ಬಾಳಲು ಬಾರದೆ ?
ಗೋಳಿಗೇ ಗೋಳವನು ಸುತ್ತುವ ಧೈರ್ಯ ನರತೆಯ ಸಾರದೆ ?
ಸೊಗವೊ ದುಗುಡವೊ, ಬಾಳೊ ಸಾವೋ ಪ್ರೀತಿಯೋ ಅಪ್ರೀತಿಯೋ ?
ಹಗಲೊ ಇರುಳೋ, ತಂಪೊ ತಾಪವೊ ಗೀತಿಯೋ ಅಪಗೀತೆಯೋ
ಏತಕೀ ದೈನ್ಯಪ್ರಸಾರಣ ? ಏತಕೀ ಸಾಹಸವಿದಾರಣ ?
ಮಾತುಮಾತಿಗೆ ಜೀವಸಂಪ್ರಿಯ ! ಏತಕೀ ಪೌರುಷ ನಿವಾರಣ ?

೩

ಏಳು ಬೀಳುಗಳಿದ್ದರೂ ಉತ್ಥಾನಪರ ನೀ ಮಾನವ ।
ಬೀಳುಗಳೆ ಉತ್ಥಾನ ಸೋಪಾನಂಗಳರಿಯೀ ಗಾನವ ।
ಬಿದ್ದರೂ ನಗು, ಎದ್ದರೂ ನಗು, ನಗುತ ನಗಿಸೀ ಲೋಕವ ।
ಮುದ್ದೆಯಾಗಿದೆ ಮೊದಲೆ ಸಂಕಟ, ಬೆಳಸದಿರು ನೀ ಶೋಕವ
ನೀಡು ಬುದ್ಧಿಗನಂತಬೋಧನ ನಡಸು ನೀ ಆನಂದ ಶೋಧನ
ಮಾಡದೆಯೆ ಮಿಥ್ಯಾವಿರೋಧನ । ನಡೆಯೊ ಮುಂದಕೆ ಹೇ ಯಶೋಧನ ।

# ಏಳು ! ಎಚ್ಚರಾಗು !!!

ಎಚ್ಚರಾಗು ಏಳು ನಿದ್ರೆ ಸಾಲದೇ ಪ್ರಮಾದೀ ।
ತ್ಯಾಗಹೀನವಾದ ಭೋಗ ಆತ್ಮನಾಶಕಾರಿ ರೋಗ ।
ಸಲ್ಲದಲ್ಲಿ ಚಿತ್ತಯೋಗ ಕೇಳು ಭೋಗವಾದೀ ॥ ೧ ॥

ಸತ್ಯಭಾವನಾ ವಿಯುಕ್ತ ಸ್ವಾರ್ಥಸಾಧನಾ ಪ್ರಯುಕ್ತ ।
ಈ ಪ್ರಪಂಚ ದಂಭಯುಕ್ತ ಮೋಸ ಸಾಕು ಕಾದಿ ॥ ೨ ॥

ತನ್ನದೆಂಬ ಭ್ರಾಂತಿ ಮಾಯೆ ತಥ್ಯಹೀನವಾದ ಛಾಯೆ ।
ಮಾರು ಹೋಗಬೇಡ ಕಾಯ ನೀನದಂ ವಿವಾದೀ ॥ ೩ ॥

ಪತ್ನಿ-ಪುತ್ರ ಬಂಧುರಾಗ ಸೌಖ್ಯದಲ್ಲಿಯೇ ಸರಾಗ ।
ಮೃತ್ಯು ಬಂದು ನುಂಗುವಾಗ ಆರಿಗಾರು ವಾದೀ ॥ ೪ ॥

ಕಾಮಲೋಭ ಮದವರೋಧ ಹೆಮ್ಮೆ ಈರ್ಷ್ಯೆಯೇ ಅಬೋಧ ।
ಶತ್ರುವೃಂದ ಜಯಿಸು ಯೋಧ ಧೀರನೀ ವಿಷಾದೀ ॥ ೫ ॥

ನೀನು ಗೆಲ್ಲಲಾಗದಲ್ಲಿ ಕಾಮ ಹೂಡು ಮುಕ್ತಿಯಲ್ಲಿ ।
ಕ್ರೋಧ ತೋರಸತ್ಯದಲ್ಲಿ ಮುಗ್ಧ ಭಗ್ನವಾದೀ ॥ ೬ ॥

ಲೋಭ ಬೋಧ ಲಾಭದಲ್ಲಿ ಮೋಹ ತ್ಯಾಗಭಾವದಲ್ಲಿ ।
ಹೆಮ್ಮೆ ಆರ್ಯಭಾವದಲ್ಲಿ ಸ್ಥಾಪಿಸರ್ಥವಾದೀ ॥ ೭ ॥

ಆತ್ಮಸಾಧನಾಧ್ವದಲ್ಲಿ ನಿನ್ನ ಮೀರಿಪನ್ಯರಲ್ಲಿ ।
ಈರ್ಷ್ಯೆತಾಳು ಚಿತ್ತದಲ್ಲಿ ಕಾಣು ನಿನ್ನ ಹಾದೀ ॥ ೮ ॥

ಪಾಪಹೀನ ಶುಭ್ರಕರ್ಮ ಒಂದೆ ಆತ್ಮಶುದ್ಧಿ ಮರ್ಮ ।
ಈಕ್ಷಿಸಿಂತು ಸತ್ಯಧರ್ಮ ಶುದ್ಧತತ್ತ್ವವಾದೀ ॥ ೯ ॥

ಪಾಪಕುಗ್ರನಾಶಕೋರಿ ಸಾವಿಗಂ ಪ್ರಕಾಶ ತೋರಿ ।
ಸರ್ವಶಾಂತಿಗಾಗಿ ಹೋರಿ ಸಾಗು ಶಾಂತಿವಾದೀ ॥ ೧೦ ॥

ಮುಂದೆ ಸಾಗಿ ನೇರವಾಗಿ ಈಶನೊಬ್ಬನೆದುರು ಬಾಗಿ ।
ಓ ಸುಧಾರಸಾನುರಾಗೀ ವರ್ಧಿಸಾತ್ಮವಾದೀ ॥ ೧೧ ॥

---

ಅಗ್ನೇ ಗೃಹಪ್ರತೇಽಭಿ ದ್ಯುಮ್ನಮಭಿ ಸಹ ಆ ಯಚ್ಛಸ್ವ । (3.39)



# ಮರ್ಮಾಂತರದಿಂ ತಾರ ನಗೆ !

ನೀನಹೆ ದುರ್ಬಲನೆಂಬೀ ಹುಲು ಬಗೆ
ಮಾನವ ತರದ್ದೈ ಚಿನ್ಮಯನೇ !
ಏನೇನ್ನೈಸಿರಿ ನಿನ್ನೊಳಗಡಗಿದೆ
ಧ್ಯಾನಿಸು ನೀನೇಂ ಮೃಣ್ಮಯನೇ ? ॥ ೧ ॥

ಜಡಭೂತಂಗಳ ಸಂಘವೆ ನೀನೇ ?
ಬಿಡು ಕೀಳರಿಮೆಯ ಎನ್ನಾತ್ಮ !
ಒಡೆಯನು ಭೌತಕ ದೇಹಕೆ ನೀನಹೆ
ಒಡನಿಹ ನೆನಪಿಡು ಪರಮಾತ್ಮ ॥ ೨ ॥

ನೋಯುವ ಚೇತನ, ನೀನಹೆ, ಒಪ್ಪಿದೆ
ಸಾಯುವನೆಂದಿಗು ನೀನಲ್ಲ.
ನೀ ಯತುನದ ಮೃತಿಯನೆ ಸಾಯಿಸಲಿಹೆ
ಕಾಯುವ ವಿಭು ಜೊತೆಗಿಹನಲ್ಲ । ॥ ೩ ॥

ಅಂಜಿಕೆ ನಂಜದು ಧೈರ್ಯವೆ ಜೀವನ
ಹಿಂಜಿ ಹೋಗದಿರು ಓ ಜೀವ ।
ಬಾಳಿನ ತಳಹದಿ ಸಾತ್ವಿಕ ಛಲವೇ
ಏಳು ! ಅದಾವನು ನಿನಗೀವ ? ॥ ೪ ॥

ಕೆಚ್ಚೆದೆಯಿಂದಲೆ ಮುಂದಕೆ ಸಾಗೈ
ನೆಚ್ಚುಗೆ ನಿನ್ನೊಳು ನಿನಗಿರಲಿ.
ಮೆಚ್ಚುವನದನಾ ವಿಶ್ವಚೇತನಂ
ಕಿಚ್ಚದು ನಂದದ ತೆರವಿರಲಿ. ॥ ೫ ॥

ನಿರ್ಮಲ ಚರಿತನೆ ಜೀವನಮೌಲ್ಯವ
ನಿರ್ಮಿಸಬಲ್ಲನು ನಿನಗೆನಗೆ.
ಕರ್ಮಕರ್ಮದಲಿ ಶಕ್ತಿಯನೂದುತ
ಮರ್ಮಾಂತರದಿಂ ತಾರ ನಗೆ ॥ ೬ ॥

(ಹುಲುಬಗೆ = ಹಗುರವಾದ ಭಾವನೆ, ಚಿನ್ಮಯ = ಚೈತನ್ಯಯುಕ್ತ, ಐಸಿರಿ = ಐಶ್ವರ್ಯ, ಮೃಣ್ಮಯ = ಭೌತಿಕವಸ್ತು, ಚಿದ್ಘನಸತ್ವ = ಚೇತನನ ಘನವಾದ ಶಕ್ತಿ, ಸಾತ್ವಿಕ ಛಲ = ಕೊಂಕಿಲ್ಲದ ಹಠ, ವಿಶ್ವಚೇತನ = ಪರಮಾತ್ಮ, ಕಿಚ್ಚು ಉತ್ಸಾಹ, ಹುರುಪು, ನಿನಗೆನಗೆ = ನಿನಗೆ + ಎನಗೆ)

---

ಕವಿ ಸಮ್ರಾಜಮತಿಥಿ ಜನಾನಾಮ್॥ (7.24; 33.8)

# ವಿಶ್ವಮೈತ್ರೀ ರಾಗ ಹಾಡುವ ನೀನು ಯೋಚಿಸಲಾರೆಯಾ ?

ವಿಶ್ವಮೈತ್ರೀ ರಾಗ ಹಾಡುವ ನೀನು ಯೋಚಿಸಲಾರೆಯಾ ?
ವಿಶ್ವನಾಥನ ಪುತ್ರರೆಲ್ಲರು, ಸ್ವಸ್ವಭಾವವ ತಾರೆಯಾ ॥ ೧ ॥

ನಿನಗೆ ನೀನೇ ಮೋಸಹೋಗಿಹೆ ಚಿಂತಿಸೈ ನಸು ಜೀವನೇ ।
ವಿನತರಾಶ್ರಯ ದೇವ ನಿನ್ನಯ ಬಾಳ್ಗೆ ವೈರವನೀವನೇ ?॥ ೨ ॥

ಧ್ಯಾನಿಸೊಳಮುಖನಾಗಿ ಇಂದ್ರಿಯ ವೃಂದವಾಗಿದೆ ಬಾಧಕ ।
ನೀನೆ ಅವುಗಳ ದಾಸನಾಗಿಹೆ ನೀನದೆಂತಹ ಸಾಧಕ ? ॥ ೩ ॥

ಇಂದ್ರಿಯಂಗಳ ಸ್ವಾಮಿಯಾಗದೆ ನೀನೆ ಮಣಿದಿಹೆ ಮೋಹಿಯೇ ।
ಇಂದ್ರಿಯೇಶ್ವರನಾಗದೆತ್ತಣ ಮೈಮೆ ಪೇಳವರೋಹಿಯೇ ॥ ೪ ॥

ಸ್ನೇಹಿಜನರೇ ಶತ್ರುವಾಗಿಹೆ ಒಳಗಿನರಿಗಳ ಜೈಸದೇ ।
ದೇಹಕೇ ಪ್ರಾಧಾನ್ಯನೀಡುವ ನೋಯ್ವೆತಾಪವ ಸೈಸದೇ ॥ ೫ ॥

ಎದ್ದು ನಿಲ್ಲೈ ನಿನ್ನ ನೀನೇ ಗುರುತಿಸಾಗಲೆ ಬಾಳುವೆ ।
ಬಿದ್ದ ನೋವೇ ಸಾಕು ಎಚ್ಚರಗೊಳ್ಳು ಜೀವಿತವಾಳುವೆ ॥ ೬ ॥

ಶಕ್ತಿಸಂಚಯಗೈದು ಭೌತಿಕಸತ್ಯಭೋಗವ ಸಾಧಿಸು ।
ಯುಕ್ತಿಯಿಂ ಜಗಕಂಟಿಕೊಳ್ಳದೆ ಈಶ್ವರನ ಆರಾಧಿಸು ॥ ೭ ॥

ಭುಕ್ತಿಯಿಲ್ಲದೆ ಮುಕ್ತಿಯಿಲ್ಲದೆ ಎಲ್ಲವಿಲ್ಲದೆ ಚಿಂತಿಸೆ ।
ಭಕ್ತವರ್ಯನೆ । ಇದನು ತಿಳಿದರೆ ಎಂದಿಗೂ ನೀ ಚಿಂತಿಸೆ ॥ ೮ ॥

(ಸ್ವಸ್ವಭಾವ = ಆತ್ಮಾಪವ್ಯಭಾವನಾ) (ಅವರೋಹೀ = ಕೆಳಕ್ಕಿಳಿಯುವವನು)
(ಭೌತಿಕಸತ್ಯಭೋಗ = ಸಾತ್ವಿಕ ಭೌತಿಕಭೋಗ) (ಚಿಂತಿಸೆ = ಆಲೋಚಿಸಲು, ಚಿಂತಿಸುವುದಿಲ್ಲ)

---

ದಿವ್ಯ ಅತಿಥಿಯಾದ ಅಗ್ನಿಯು ನಮಗೆ ಮಂಗಳಕರನಾಗಲಿ.



# ಮತ್ತೇನನೂ ಕೋರೆ-ತಲೆಬಾಗಿ ನಿಂದೆ

೧

ಓ ಮದಂತರ್ಯಾಮಿ ಸರ್ವದರ್ಶೀದೇವ
ಈ ಮನದ ಅನಿಸಿಕೆಗೆ ವಾಗ್ರೂಪವೇಕೆ ? ।
ಮಾನಸಾಂತರ ಬಲ್ಲ ನಿನಗೆ ವಾಗ್ವೃಂದಗಳು
ಏನಧಿಕ ಪೇಳಬಲ್ಲವೋ ? ಬರಿಯಕೇಕೆ ॥

೨

ಜ್ಞಾನಗಮ್ಯನು ನೀನು ಧ್ಯಾನಗಮ್ಯನುನೀನು
ಮೌನಗಮ್ಯನು ನೀನು ಎಂಬ ಈ ಭಾವ ।
ನಾನರಿಯದಂತೆಯೇ ಆತ್ಮನನೆ ಬಂಧಿಸಿದೆ
ಏನೊ ಎಂತೋ ಕಾಣೆ ಓ ಚಿತ್ರಭಾವ ॥

೩

ಆದರೇಂ ನಿಜವಾಗಿ ಶ್ರುತಿಗಳುಂ ವಾಣಿಗಳೆ ।
ಸಾಧನಂ ಸಾಧ್ಯಕ್ಕೆ ಇಂತಿರಲು ಸತ್ಯ-
ನಾ ಧಿಕ್ಕರಿಪೆನೆಂತು ವಾಗ್ವಿಲಾಸದ ಮೈಮೆ ?
ಕಾದಿಟ್ಟದಂ ಬಳಸುವುದು ತಾನಗತ್ಯ ॥

೪

ಅರ್ಥಿಸೆನು, ಪ್ರಾರ್ಥಿಪೆನು ಪೌರುಷವನಾಧರಿಸಿ
ವ್ಯರ್ಥವೇನನು ಕೋರೆ ಚೇತೋವಿಹಾರಿ ।
ಮನದ ಭಾವಕೆ ನುಡಿಯ ಹೊದಿಕೆ ಹೊದಿಸುವ ಪೆರ್ಮೆ
ಇನಿತೆನಗೆ ಕರುಣಿಸೈ । ಇದೆ ಎನ್ನದಾರಿ ॥

೫

ನಿನ್ನನೇ ನಾ ನೆಚ್ಚಿ ಶಕ್ತಿಯೆಲ್ಲವ ಹಚ್ಚಿ
ಮುನ್ನಡೆಗೆ ಮುಖಮಾಳ್ಪೆ ನಾ ಮೌನದಿಂದೆ ।
ಎನ್ನ ಮೌನವೆ ಚೆನ್ನು ನುಡಿಯ ಗುಡಿ ತಾನಾಗೆ
ಇನ್ನೇನನೂ ಕೋರೆ, ತಲೆಬಾಗಿನಿಂದೆ ॥

# ಈಸಿ ಜೈಸುವೆನೊಬ್ಬನೇ ಜಗವ ನಾನಿಂದು

೧

ಏನೆಂದು ಬೇಡಲೈ ಎನ್ನ ಆದ್ಯಾಚಾರ್ಯ ।
ನೀನು ಅಂತರ್ಯಾಮಿ ಅಮಿತ ನಿನ್ನೌದಾರ್ಯ ॥

೨

ನುಡಿಯನೊರೆಯುವ ಮುನ್ನ ನನ್ನ ಚಿತ್ತದ ಭಾವ ।
ಒಡನೆಯೇ ನೀನರಿವೆ ಒಲವಿನುದಯವ ಸಾವ ॥

೩

ಇಂತಿರಲದೆಂತು ಬಗೆ ಹಲಹೊರಕೆಗಳ ಹೊತ್ತು ।
ಅಂತರನೆ । ಒಳ-ಹೊರಗೆ ತಿಳಿವದಾರದೊ ಸೊತ್ತು ॥

೪

ನಿನ್ನ ದಯೆಯಂತೆಯೇ ನ್ಯಾಯವೂ ಸಹ ಬಲ್ಲೆ ।
ಇನ್ನೆಂತು ಕುಂದುಗಳ ಮನ್ನಿಸೆಂದೆನಬಲ್ಲೆ ॥

೫

ಸಹನಶೀಲನು ನೀನು ಎನ್ನುತಿದೆ ಶ್ರುತಿಘೋಷ ।
ಸಹನೆಯಂ ಕ್ಷಮೆಯೆಂಬ ತಿಳಿವೆ, ತಿಳಿದೆನು ದೋಷ ॥

೬

ಮೌನವಾಣಿಗಳಿಂದ ನಾನು ಒಳಮುಖನಾಗಿ ।
ಏನನೂ ಒರೆಯದೇ ನಿಂದಿರ್ಪೆ ತಲೆಬಾಗಿ ॥

೭

ಎನ್ನಹಿತವೇನೆಂದು ಎತ್ತೆಂದು ನೀ ಬಲ್ಲೆ ।
ಇನ್ನು ಗುಡಿ ಬಿತ್ತರಿಪ ಮೂಢತೆಗೆ ನಾ ಸಲ್ಲೆ ॥

೮

ಓ ಸುಧಾಂಬುಧಿ ! ಎರಚು, ಸಾಕು ಒಂದೇ ಬಿಂದು ।
ಈಸಿ ಜೈಸುವೆನೊಬ್ಬನೇ ಜಗವ ನಾನಿಂದು ॥

* ಒಲವಿನುದಾಯವಸಾವ = 'ಬೇಕು' ಎಂಬುದರ ಹುಟ್ಟನ್ನೂ, ಅಳಿವನ್ನೂ

---

ಹೇ ಅಗ್ನಿ ! ವಿದ್ವಾಂಸರು ನಿನಗೆ ಪ್ರಿಯರಾಗಲಿ



# ನಾವೆಯೊಂದಿಗೆ ಬೀಳುತೇಳುತ ತೂಗಿಕೋ ಏಂ ಬಾಧಕ

೧

ಕ್ರುದ್ಧವೀ ಸಂಸಾರ ಸಾಗರ ಪವನ ತೀವ್ರ ಭಯಂಕರ .
ಎದ್ದು ಬೀಳುವ ತೆಂಗಿನೆತ್ತರದಲೆಗಳೂ ಪ್ರಳಯಂಕರ ॥

೨

ಆದರೇಂ ಭಯ ವರುಣ ದೇವನ ಯಜ್ಞನೌಕೆಯ ಕಾಣೆಯಾ ?
ಆ ದಯಾಮಯನೊಂದಿಗೇ ಇಹ ಧೀರನಾಗಲು ಮಾಣೆಯಾ ॥

೩

ಘೋರ ಝುಂಝೂವಾತ ನೌಕೆಯ ತೂರುತಿದೆ ಆಕಾಶಕೆ ।
ತೋರೆ ಮರುಚಣ ಕುಸಿಯುತಿದೆ ಅದೆಸಿಕ್ಕಿ ಇಳಿತದ ಪಾಶಕೆ ॥

೪

ಅಂಜೆ ? ಸಾವಿನ ಮಂಜೆ ? ಹುರುಪಿನ ಸಂಜೆ ? ಬಾಳ್‌ನಿಸ್ಸಾರವೇ ।
ಹಿಂಜರಿವೆಯಾ ತಂದೆ ಜೊತೆಗಿಹ ಕಾವುದವನಿಗೆ ಭಾರವೇ ॥

೫

ನಾವೆಯೇ ಉಯ್ಯಾಲೆ ಎನ್ನಯ ಚೇತನನೇ ನೀ ಸಾಧಕ ।
ನಾವೆಯೊಂದಿಗೆ ಬೀಳುತೇಳುತ ತೂಗಿಕೋ ಏಂ ಬಾಧಕ ॥

# ಹಾಸಿ ಮಲಗುವ ಆಲಸಿಗೆ ಸುಧೆ ದಕ್ಕದು

ಏನ ಚಿಂತಿಸಿ ಕುಸಿಯುತಿಹೆ ಸಖ ಏತಕೀ ಭಯ ಮಾನವ ।
ಹೀನಭಾವವ ವರ್ಜಿಸೇಳ್ಕೈ ಕಾದುಕೊಳು ನೀ ಮ್ಹಾನವ ॥ ೧ ॥

ಚಿತ್ರಸೃಷ್ಟಿಯ ಕರ್ತನಾತ ವಿಚಿತ್ರ ಶಿಲ್ಪಿಯೆ ಭಾವಿಸೆ ।
ಮಿತ್ರನವನೇ ನಿನಗೆ ಸಾಧಕ ಹೇತುವೇನಿದೆ ಧಾವಿಸೆ ॥ ೨ ॥

ಏನನೂ ನೀ ಕೇಳಬೇಡವೊ ಎಲ್ಲವನು ಅವ ಬಲ್ಲನು ।
ಮೌನದಿಂ ನಿಲು ಅವನು ಕರಗಿಸ ಘೋರಬಾಧೆಯ ಕಲ್ಲನು ॥ ೩ ॥

ನಚ್ಚು ನಿನ್ನನೆ ನೀನು ಮೆಚ್ಚುವ ನಿನ್ನನಾ ಕರುಣಾಧನ ।
ಹೆಚ್ಚಿನಿಂ ಮುನ್ನುಗ್ಗು ಕಿಚ್ಚಿಗೆ ನುಚ್ಚುನೂರ್ ನವಬಂಧನ ॥ ೪ ॥

ಎಷ್ಟಗಳಿಪೆಯೊ ಅಷ್ಟೆ ನಿನ್ನದು ಕಷ್ಟವೆಂದರೆ ಸಾಗದು ।
ಇಷ್ಟ ಮಾತ್ರಕಭೀಷ್ಟ ಒಲಿಯದು ನಿಷ್ಠೆಯಿಲ್ಲವೆ ? ಆಗದು ॥ ೫ ॥

ಹಾಸಿ ಮಲಗುವ ಆಲಸಿಗೆ ಸುಧೆ ದಕ್ಕದದು ಬದಿಗೇ ಸರಿ ।
ಆ ಸುಧಾರಸ ದುಡಿದು ದಣಿವನ ತೃಷೆಯನಾರಿಸಲೇ ಸರಿ ॥ ೬ ॥

(ಹೇತು = ಕಾರಣ, ಧಾವಿಸೆ = ಓಡಿಹೋಗಲು, ಕರುಣಾಧನ = ದಯೆಯನ್ನೇ ಧನವಾಗುಳ್ಳ ಪರಮಾತ್ಮ, ಕೆಚ್ಚು = ಉತ್ಸಾಹ, ಕಿಚ್ಚು = ಪರೀಕ್ಷೆಯ ಬೆಂಕಿ, ಅಭೀಷ್ಟ = ಉದ್ದೇಶ್ಯ, ಗುರಿ. ನಿಷ್ಠೆ = ದೃಢತೆ, ಬದಿಗೇ ಸರಿ = ನುಣುಚಿ ಹೋಗುವುದೇ ಸತ್ಯ. ಆರಿಸಲೇ ಸರಿ = ಆರಿಸುವುದಕ್ಕೆಯೇ ಒಪ್ಪು)



# ಏತಕಂಜುವೆ ಭರತನಂದನ ?

ಏತಕಂಜುವೆ ಏಕೆನಂಜಿಗೆ ಚಿತ್ತಸೋಲುವೆ ಭರತನಂದನ ।
ಏತರಳುಕ್ಕೈ ಮುಂದ ಕಡಿಯಿಡು ಏಳು ಅಂತರ–ಅರಿನಿಕಂದನ ॥ ೧ ॥

ನಿನ್ನನೀಗಲು ವರ್ಜಿಸವಗುಣ ಸಲಿಸು ದೇವಗೆ ಸದಭಿನಂದನ ।
ನಿನ್ನ ಜೈಸುವ ಧೀರನಾವನು ನಿನಗೆ ಲಭಿಸುವುದು ಜಗದ ವಂದನ ॥ ೨ ॥

ಬಾಹ್ಯಮರೆ ಒಳಕಣ್ಣತೆರೆ ನೀ ಮಾಡು ವತ್ಸನೆ ಆತ್ಮಶೋಧನ ।
ಸಹ್ಯವಾರಿಗೆ ನಿನ್ನ ಹಗೆತನ ಹಿಂದೆ ಸಾಗಲಿ ತತ್ವಬೋಧನ ॥ ೩ ॥

ಮೊದಲು ನೀಕಲಿ ಆಗು ನೀ ಬಲಿ ಸಿಗುವುದಾಗಲೆ ನಿನಗೆ ಮೋದನ ।
ಸದೆದು ಹರಣವ ಪಡೆಯೆ ಕರಣವ ನಿನಗಹುದು ಲೋಕಾನುಮೋದನ ॥ ೪ ॥

ನೀನು ಅತ್ತರೆ ಲೋಕವಳದ್ಯೆ ಹೊರಗಣಾವುದು ಅಲ್ಲ ಬಾಧಕ ।
ನೀನು ನಕ್ಕರೆ ಜಗವು ನಗುವುದು ನಿನ್ನ ಜೊತೆಯಲೆ ಸತ್ಯಸಾಧಕ ॥ ೫ ॥

ಗೋಳಿಗೊಡ್ಡದೆ ಏಕೆ ಲೋಕವ ಮಾಡಿ, ನೀ ಕಾಂತಾರ ರೋದನ ।
ಏಳು ಉಣ್ಣಿಸು ಮಂದಿಮಂದಿಗೆ ನೀನು ಸೇವಿಸಲಭ್ಯ ಓದನ ॥ ೬ ॥

ಆ ಸುಧಾಸಾಗರನ ಮರೆತರೆ ನಿನ್ನ ಬಾಳೇ ಬೀಡು ಸಾವಿಗೆ ।
ಆಸರೆಯು ನಿನಗವನೆ ನಗುತಲೆ ಸೇರಿಕೊಳೆ ಸಾವಿರದ ತಾವಿಗೆ ॥ ೭ ॥

ಭರತನಂದನ = ಭಗವಂತನ ಮಗ
ಅಂತರ ಅರಿನಿಕಂದನ = ಒಳಗಣ ಶತ್ರುಗಳನ್ನು ಸದೆಬಡಿಯುವವನು
ಸದಭಿನಂದನ = ಹಾರ್ದಿಕ ಧನ್ಯವಾದ, ವಂದನ = ಗೌರವ
ಸಹ್ಯ = ಸಹಿಸಲಾಗುವಂತಹುದು, ಹಿಂದೆ ಸಾಗಲಿ ತತ್ವಶೋಧನ = ಮೊದಲು ಆತ್ಮಶೋಧನ, ಆಮೇಲೆ ತತ್ವಬೋಧನ, ಸತ್ಯಸಾಧಕ = ಸತ್ಯಸಾಧನಾನಿರತ.
ಮೋದನ = ಮೋದ, ಆನಂದ, ಸದೆದು ಹರಣವ ಪಡೆಯ ಕರಣರ = ಪ್ರಾಣವನ್ನಾದರೂ ಒತ್ತೆಯಿಟ್ಟು ಕಾರ್ಯಸಾಧಿಸಿದರೆ, ಲೋಕಾನುಮೋದನ = ಜಗತ್ತಿನ ಒಪ್ಪಿಗೆ.
ಕಾಂತಾರರೋದನ = ಅರಣ್ಯದಲ್ಲಳುವುದು.
ಅಲಭ್ಯಓದನ = ಸುಲಭವಾಗಿ ಸಿಕ್ಕಿದ ಭೋಜನ, ಸಾವಿರದ ತಾವಿಗೆ = ಸಾವಿಲ್ಲದ ಸ್ಥಾನಕ್ಕೆ.

# ಅವನಂ ಮರೆವೆಯ ಚೇತನನೇ ?

ಎನ್ನಯ ಚೇತನ ! ಚೇತೋಹಾರಿಯ
ನೆನೆವುದನೇತಕೆ ನೀ ತೊರೆದೆ ?
ನಿನ್ನಯ ಚೇತೋಹಾರಿಯ ಮಿಲನಕೆ
ಸೊನ್ನೆಯ ನೇತಕೆ ನೀ ಕೊರೆದೆ ? ॥ ೧ ॥

ಕಾಮವ ತೊರೆಯದೆ ಕ್ರೋಧವ ತೊರೆಯದೆ
ಸತ್ಯವನೇತಕೆ ವರ್ಜಿಸಿದೆ?
ಲೋಭವ ನೀಬಿಡೆ ಮೋಹವನೂ ಬಿಡೆ
ಮೈತ್ರಿಯನೇಕೆ ವಿಸರ್ಜಿಸಿದೆ ? ॥ ೨ ॥

ಗರ್ವದಿ ಮೆರೆದಿಹೆ ಈರ್ಷ್ಯೆಯಲುರಿದಿಹೆ
ಶಾಂತಿಯನೆದುರಿಸಿ ಗರ್ಜಿಸಿದೆ ?
ಈ ಪರಿ ಏನನು ಸಾಧಿಸಬಲ್ಲೆಯೊ ?
ಭಾಗ್ಯವನೇ ನೀ ತರ್ಜಿಸಿದೆ ? ॥ ೩ ॥

ಸಾವಿಗೆ ಸಾವಾರ್ ? ಓ ಹತಭಾಗ್ಯನೇ !
ನಿಜಕೂ ವಿಶ್ವನಿಕೇತನನೇ
ದೇವ ಸುಧಾನಿಧಿ ನಿನ್ನನು ಮರೆಯನು
ಅವನಂ ಮರೆವೆಯ ಚೇತನನೇ ॥ ೪ ॥

(ಚೇತೋಹಾರಿ = ಚಿತ್ತವನ್ನೆಳೆಯುವ ಭಗವಂತ. ಮಿಲನ = ಸೇರುವಿಕೆ. ಸೊನ್ನೆಯ ತೊರೆದೆ = ಸೊನ್ನೆ ಸುತ್ತಿದೆ. ವರ್ಜಿಸು, ವಿಸರ್ಜಿಸು = ಬಿಡು. ಗರ್ಜಿಸು = ಕೂಗಾಡು. ತರ್ಜಿಸು = ಹೆದರಿಸು, ಎದುರಿಸು. ಸಾವಿಗೆ ಸಾವ್ ಆರು = ಕಾಲಕ್ಕೂ ಕಾಲನಾರು ? ವಿಶ್ವನಿಕೇತನ = ವಿಶ್ವವನ್ನೇ ಮನೆಯಾಗುಳ್ಳ ಪರಮಾತ್ಮ.)



# ಪೂರಯಿಸು ಕುಂದುಗಳ ನಾವೆತ್ತ ದೂರ ?

ಎಲ್ಲಿಂದ ಬಂದೆನೋ ಏಕೆಂದು ಬಂದೆನೋ
ಎಲ್ಲಿ ಹೋಗಲಿಕುಂಟೋ ನಾ ಕಾಣೆನಲ್ಲ! ।
ನಾನೆ ಬಂದೆನೂ ನೀನೆಯೇ ಕಳುಹಿಕೊಟ್ಟಿಹೆಯೋ?
ಏನೋ ಏಕೋ ಎಲ್ಲವಿದನಾವಬಲ್ಲ ॥ ೧ ॥

ಎಲ್ಲೆಲ್ಲಿಯೋ ಅಲೆದೆ ಏನೇನನೋ ಕಂಡೆ
ಎಲ್ಲಿಯೂ ಅಭಿಲಾಷೆ ಕೊನೆಗಾಣಲಿಲ್ಲ ।
ಆಸೆಯೇ ? ಅದು ಏನೊ ಅರಿವಿಗಂದಲೆ ಇಲ್ಲ
ಘಾಸಿ ಪಡುವುದು ಮಾತ್ರ ನಸುಕುಂದಲಿಲ್ಲ ॥ ೨ ॥

ಉನ್ನತ ಹಿಮಾಲಯ ಉತ್ತುಂಗ ಶೃಂಗಗಳ
ಬನ್ನವೆಣಿಸದೆ ಏರ್ದೆ ಏಕೋ ವಿಧಾತ್ರ ।
ನನ್ನಂಗ-ಅಂಗವೂ ಸೆಟೆದು ನಿಂತಿತು ಹಿಮದಿ
ಎನ್ನ ಜೋಳಿಗೆಗಾಯ್ತು ಬರಿ ಸೊನ್ನೆ ಮಾತ್ರ ॥ ೩ ॥

ದೇವ ! ಏರುವುದೇಕೆ ? ಜಾರಿಬೀಳಲಿಕೆಂದೆ ?
ಸಾವು ಮಾತ್ರವೆ ಸತ್ಯ ಜೀವನವು ಸುಳ್ಳೆ ? ।
ಜೀವಂತ ಏರಲೆಂದೇ ಇತ್ತ ನಡೆತಂದೆ
ಸಾವದಾರಿಯಲಿಷ್ಟು ಮೊನಚಾದ ಮುಳ್ಳೆ ? ॥ ೪ ॥

ಯೋಗವಿದ್ಯಾಜಾಲ ರೋಗಭಯಜಂಜಾಲ
ಭೋಗ ಒಂದೇ ಸತ್ಯ ಈ ಭವ ವಿಚಿತ್ರ ।
ಎನ್ನುತಿದೆ ಮುಗ್ಧಮನ ಕುಸಿಯುತಿದೆ ತನ್ನತನ
ಇನ್ನಾರ ಕೇಳಲೈ ಓ ನಿತ್ಯ ಮಿತ್ರ ॥ ೫ ॥

ದೇವಪಥ ತೋರೆಂದು ಎನಿತೆನಿತೊ ಗೋಗರೆದೆ
ಜೀವ! ನೀನೇ ಅರಸು ಎಂದು ನೀನಂದೆ ।
ನೀನಿರದೆ ನಾನುಂಟೆ ಎಂದು ನಾ ಬೆಸಗೊಂಡೆ
ನಾನು ನಿನ್ನಲಿರ್ಪೆ ಎಂದೊರೆದೆ ತಂದೆ ॥ ೬ ॥

ಇರ್ಪೆಯೋ ಇಲ್ಲವೋ ಎಂಬ ಸಂಶಯದ ಭಯ
ಇರ್ಪುದನೆ ಕುಕ್ಕುತಿದೆಯಲ್ಲ ಓ ನಾಥ ।
ತರ್ಪೆನೆಲ್ಲಿಂದಿದಕೆ ಉತ್ತರವ ನಾ ಮೂಢ
ಅರ್ಪಿಸಲಿ ಬೇರಾವ ನುಡಿ ನಾನನಾಥ ॥ ೭ ॥

ಕಂದ ನಿನಗೇಕಿಷ್ಟು ನೈರಾಶ್ಯಧಾವಂತ
ಕಂದಿತೇ ನಂದಿತೇ ಆ ವೇದಬೋಧ ।
ಹಿಂದುಳಿದು ಕುಂದದಿರು ನಿನ್ನನೀ ಕಂಡುಕೊಳು
ಚಂದವಹುದೆಲ್ಲವೂ ಮಾಡಾತ್ಮಶೋಧ ॥ ೮ ॥

ಅರಿತೆ ಓ ಆದಿಗುರು! ನನ್ನನಾನರಿತಾಗ
ಇರುವೆ ನೀನೆಂಬರಿವು ಬಂತುತಾ ಮೂಡಿ ।
ಇರುವೆನೆಂದಾದಲ್ಲಿ ಬೇಕೆಂಬುದಿರದುಂಟೆ
ಹರಿದು ಬಂದಿದೆ ಬೇಕು ಬೇಡಗಳ ಕೂಡಿ ॥ ೯ ॥

ಕಾಮನೆಗೆ ಬರವಿಲ್ಲ ಇರುವಿಗೂ ತೆರವಿಲ್ಲ
ನೀ ಮಹಾದಾನಿಯೈ ಕೊಡುಗೈಯ ಶೂರ ।
ಸಾರಸರ್ವಸ್ವನೇ ! ಓ ಸುಧಾಸಾಗರನೆ !
ಪೂರಯಿಸು ಕುಂದುಗಳ ನಾವೆತ್ತದೂರ ॥ ೧೦ ॥



# ವಿಶ್ವಮೋದನ ನಮಗೆ ಬೇಡ ರೋದನ

೧

ಓ ವಿಚಿತ್ರ ಚಿತ್ರಕಾರ ನಿನ್ನ ಕೃತಿ ವಿಚಿತ್ರವೈ ।
ಭಾವಿಸಲ್ಕೆ ನಿನ್ನದಲ್ಲ ಚಿತ್ರ ಬಹು ಪವಿತ್ರವೈ ॥

೨

ನಿನ್ನ ಭಾಗ್ಯವೂ ವಿಚಿತ್ರ ತ್ಯಾಗವೂ ವಿಚಿತ್ರವೈ ।
ಎನ್ನದೇವ ನಿನ್ನ ಸುತರಿಗದುವೆ ದುರ್ವಿಧಿತ್ರವೈ ॥

೩

ನಿನ್ನ ಸಂಪದ ಪ್ರಮಾದಹಾರಿ ಓ ಉದಾರನೇ ।
ಬೆನ್ನು ದೀರ್ಘ ಜೀವನಕ್ಕೆ ಹಾದಿ ವಿಶ್ವಸಾರನೇ ॥

೪

ತ್ಯಾಗಯುಕ್ತ ಭೋಗಯುಕ್ತ ಸರ್ವದಾ ಪ್ರತಾರಣ ।
ರೋಗಕಾರಿ ಭೋಗ ಅದುವೆ ದಂದುಗಕ್ಕೆ ಕಾರಣ ॥

೫

ಓ ವಿಚಿತ್ರ! ಚಿತ್ರ ಭಾಗ್ಯವಿತ್ತು ವಿಶ್ವಮೋದನ ।
ಓವಿ ನೀನು ಕಸಿವ ವೇಳೆ ನಮಗೆ ಬೇಡ ರೋದನ ॥

ಭಗವಂತನೇ ವಿಚಿತ್ರ ಚಿತ್ರಕಾರ, ವಿವಿಧ ಚಿತ್ರ - ವಿಚಿತ್ರ ಸೃಷ್ಟಿಯ ನಿರ್ಮಾತೃ
ಚಿತ್ತ್ಚರ್ = ಚೈತನ್ಯದಾತಾ; ಅದ್ಭುತ
ತ್ಯಾಗ = ದಾನ. ದುರ್ವಿಧ್ಚಿತ್ರ = ದುರದೃಷ್ಟವನ್ನು ದೂರವಿಟ್ಟು ರಕ್ಷಿಸುವಂತಹುದು.
ವಿಶ್ವಸಾರ = ವಿಶ್ವವೆಲ್ಲದರ ಸಾರದೂತನಾದ ವಿಶ್ವಚೇತನ; 'ರಸೋವೈಸ:' - ರಸರೂಪನಾದ ಪರಮಾತ್ಮ.
'ತ್ಯಾಗಯುಕ್ತ ಭೋಗ-ಯುಕ್ತ' = ತ್ಯಾಗಯುಕ್ತನಾದ ಭೋಗಸರಿ. ದುಂದುಗ = ದುಃಖ
ವಿಶ್ವಮೋದನ = ಜಗತ್ತಿಗೆಲ್ಲಾ ಆನಂದದಾಯಕ; ಹರ್ಷದಾಯಕ.
ನೀನಿತ್ತುದನ್ನು ನೀನೇ ತೆಗೆದುಕೊಳ್ಳುವಾಗ ನಾವು ರೋದಿಸೆವು.
ಈ ಕವಿತೆ "ಸಚಿತ್ರ ಚಿತ್ರಂ" ಎಂಬ ಋಕ್ಕಿನ ಭಾವಾನುವಾದ. "ಯುವಸ್ವ" ಎಂಬುದು ಕೊನೆಯ ಶಬ್ದ. 'ಯು' ಧಾತುವಿಗೆ 'ಒಂದುಗೂಡಿಸು, ಬೇರ್ಪಡಿಸು' ಎಂಬ ಎರಡು ಅರ್ಥಗಳೂ ಇವೆ.

# ನಿನ್ನನೆನೆಯುತ ಎನ್ನಮಸ್ತಕ ಬಾಗಲಿ

೧

ವಿಷ್ಣುವೇ ಪ್ರಭವಿಷ್ಣುವೇ ನಿನ್ನಂತ ಕಾಣದುದಾಗಿದೆ ।
ಜಿಷ್ಣು ನೀನು ಸಹಿಷ್ಣು ಎನ್ನುತ ಶ್ರೌತವಾಙ್ಮಯ ಸಾಗಿದೆ ॥

೨

ಎತ್ತ ಹೋದರು ಅತ್ತನೀನೇ ಸುತ್ತಲೂ ನೀನೇಹರೇ ।
ಗೊತ್ತು ಕಾಣದೆ ಹೊತ್ತನರಿಯದೇ ವ್ಯರ್ಥವೇ ಆಯ್ತೇಕರೆ ॥

೩

ನೀನು ಕಾಣದುದೇನು ದೇವನೆ ಆದರೇಂ ನಾ ಕಾಣದೆ ।
ಏನೋ ಮಾಡಲು ಹೊರಟೆ ನೀನೆಲ್ಲೆಂಬ ಮೌಢ್ಯದ ತಾಣದೆ ॥

೪

ನೀನು ಸಾಸಿರ ಕಣ್ಣನೆಂಬುದ ಮರೆತು ಮಾರ್ಗವ ತಪ್ಪಿದೆ ।
ಮೌನದಿಂದೇನೇನೊ ಎಸಗಿದೆ ಸ್ವಪ್ರಭಾವವನಪ್ಪಿದೆ ॥

೫

ಈಗ ಕಂಡೆನು ಅಂತರಾತ್ಮನೆ ನೀನು ಸರ್ವವಿಮರ್ಶಕ ।
ಆಗಸದಿ ಬಿರು ತೆರೆದ ಕಣ್ಣೇ ನೀ ಸಮಸ್ತದ ದರ್ಶಕ ॥

೬

ತಪ್ಪು ನನ್ನದು ಒಪ್ಪು ನಿನ್ನದು ದಾರಿ ತೋರು ದಯಾಳುವೇ ।
ಒಪ್ಪಿಸೆಲ್ಲವ ನಿನ್ನ ಮಡಿಲಿಗೆ ನಿನ್ನಲೇ ನಾ ಬಾಳುವೆ ॥

೭

ಓ ಸುಧಾಸಾರಸ್ವರೂಪನೆ ಬಾಳು ನಿರ್ಮಲವಾಗಲಿ ।
ಜೈಸಿ ಜೀವನ ನಿನ್ನ ನೆನೆಯುತ ಎನ್ನ ಮಸ್ತಕ ಬಾಗಲಿ ॥



# ಎನ್ನಯ ಮನ ! ಗೈ ಚಿಂತನೆ !

ಎನ್ನಯ ಮನ ಗೈ ಚಿಂತನ ಬಿಡು ನರ್ತನವ ।
ಚೆನ್ನವೆ ಮೊರೆ ? ನೀನದ ತೊರೆ ದುರ್ವರ್ತನವ ॥ ೧ ॥

ಏಕೀ ತಡೆ ? ಚಂಚಲನಡೆ ? ಧೇನಿಸು ನಸುವೆ ।
ಬೇಕೇ ಸುಖ ? ತಿರುಗಿಸು ಮುಖ ಭೌತಿಕ ಕಸುವೆ ? ॥ ೨ ॥

ಎಷ್ಟಾಡುವೆ ? ಏನ್ ಪಾಡುವೆ ? ಎಲ್ಲವು ಹುಸಿಯೆ ? ।
ಸೃಷ್ಟಿಯು ಇದೆ ಕೂಗುತ್ತಿದೆ ಏನ್ ಕತ ಕುಸಿಯೆ ? ॥ ೩ ॥

ಶ್ರುತಿ ಘೋಷವೆ ? ಸಂತೋಷವೆ ? ಎಲ್ಲವು ಮಸಿಯೆ ? ।
ಮಿತಿ ಕಾಣದ ಗತಿಗಾಗದ ಮಾತೇನ್ ಕಸಿಯೆ ? ॥ ೪ ॥

ಚಾರಿತ್ರವೆ ಹೊರೆಯಲ್ಲವೆ ಓ ಮನ ನಿನಗೆ ? ।
ತೋರಿಪೆ ಬರಿ ಗರ್ವವ ಸರಿ ಶಕ್ತಿಯ ಜಿನಗೆ ॥ ೫ ॥

ಎಲ್ಲೆಲ್ಲಿಗೆ ನುಗ್ಗುವೆ ಮಿಗೆ ನಾಚಿಕೆ ತೊರೆದೆ ।
ಸಲ್ಲದ ದಗೆ ನೋಯಿಪ ಹಗೆ ಆತ್ಮನ ಕೊರೆದೆ ॥ ೬ ॥

ಓ! ಬಿಡು ಮನ ಚಂಚಲತನ ಚಿಂತಿಸು ಘನವ ।
ಆ ಭೂಮನ ಜಗಜೀವನ ನೆನೆ ನೂತನನ ॥ ೭ ॥

ಆ ಸುಧೆಯನೆ ಹೀರೇನು ಎನೆ ಬಾಳಿಗೆ ಬೆಲೆಯೆ ।
ಜೈಸಲು ಜಗ ಪಣವದೆ ಮಗ ಬೇರೆಯನೆಲೆಯೆ ॥ ೮ ॥

ಮೊರೆ = ಕೊರಗು   ಕಸುವೇ = ಬಿಗಿಯೇ ?
ಕತ = ಕಾರಣ,   ಮಸಿಯೇ = ಕತ್ತಲೇ ?
ಕಸಿಯೇ = ಒಪ್ಪಿತವೇ ?   ಜಿನಗೆ = ತೊಟ್ಟಿಡಲು
ಭೂಮನ = ಜ್ಯೇಷ್ಠನನ್ನು   ಜಗಜೀವನ = ಜಗಚ್ಚೇತನನನ್ನು
ನೂತನನ = ನಿತ್ಯನವೀನನಾದವನನ್ನು

# ಕಾಣದುದ ಕಾಣಲೆತ್ನಿಸು ಶೂನ್ಯವಾದಿ

ನೀ ಸೊನ್ನೆ ನಾ ಸೊನ್ನೆ ಇದು ಸೊನ್ನೆ ಅದು ಸೊನ್ನೆ ।
ಹಾಸಿದುದು ತಾ ಸೊನ್ನೆ ಹೊಕ್ಕುದೂ ಸೊನ್ನೆ ॥ ೧ ॥

ಸೊನ್ನೆಯರಿವವ ಸೊನ್ನೆ ಅರಿಯದವನೂ ಸೊನ್ನೆ ।
ಸೊನ್ನೆಯಾ ಕರ್ತನೂ ಸಹ ಭಾರಿ ಸೊನ್ನೆ ॥ ೨ ॥

ಇನ್ನೇಕೆ ಬಿನ್ನವೋ ? ಬನ್ನವೂ ಸಹ ಸೊನ್ನೆ ।
ಭಿನ್ನತೆಯೆ ? ಛಿನ್ನತೆಯೆ ! ಅದು ಕೂಡ ಸೊನ್ನೆ ॥ ೩ ॥

ಆವನೇತಕೆ ಇಲ್ಲದುದ ಸೃಜಿಸಿದನೊ ? ಜಾಣ ।
ಆವನದ ನೋಡಿದನೋ ? ಕಲ್ಪನೆಯ ಕಾಣ ॥ ೪ ॥

ಶೂನ್ಯವಾದಿಯೆ ನೀನು ಇಹೆಯಲ್ಲ ಒದರಾಡೆ ।
ಶೂನ್ಯ ಎಲ್ಲವು ಎನ್ನುವುದು ಕಾಡ ಹಾಡೆ ? ॥ ೫ ॥

ನೀನಿರ್ಪೆ ನೀನಿಲ್ಲ ಎಂಬವನು ಇಹನಾರ್ಯ ।
ಆ ನಿತ್ಯ ವಿಭುಕರ್ತ – ಇದು ಅವನ ಕಾರ್ಯ ॥ ೬ ॥

ವ್ಯಕ್ತವೆಷ್ಟಿಹುದು ? ಸಾವಿರದಷ್ಟು ಅವ್ಯಕ್ತ ।
ಶಕ್ತಿಯಿಂದರಿಯದನು ಓ ಶೂನ್ಯ ಭಕ್ತ ॥ ೭ ॥

ಜಾಣತನ ಬರಿವಾದವಲ್ಲ ಮಿಥ್ಯಾವಾದಿ ।
ಕಾಣದುದ ಕಾಣಲೆತ್ನಿಸು ಶೂನ್ಯವಾದಿ ॥ ೮ ॥

ಸೊನ್ನೆ = ಶೂನ್ಯ. ಹಾಸಿದುದು = ವಿಸ್ತೃತಸೃಷ್ಟಿ. ಹೊಕ್ಕುದು = ಲಯಹೊಂದಿದ ಸೃಷ್ಟಿ.
ಬನ್ನ = ದುಃಖ. ಭಿನ್ನತೆ = ಬೇರೆ ಸೃಷ್ಟಿಯ ಇರುವು. ಛಿನ್ನತೆ = ಚದುರಿದ ಪರಮಾಣುಸಂಘಾತ.
ಕಾಡಹಾಡೆ = ವನದಲ್ಲಿನ ನಿನಾದವೆ ?
ಋಗ್ವೇದೀಯ ನಾಸದೀಯ ಸೂಕ್ತ (೧೦.೧೨೯.ಪೂರ್ಣಸೂಕ್ತ) : "ನ ತಂ ವಿದಾಥ" ಎಂಬ ಮಂತ್ರ (ಯಜು:೧೭.೩೧) ಇವುಗಳ ಸಾರ ಹಿಂಡಿ, ತೆಗೆದ ಕವಿತೆ, ಗೊಂದಲಮಯ; ಆದರೆ ಗೂಢಸತ್ಯಾನ್ವೇಷಣೆ. ಓದುಗರು ಏನಾದರೂ ಗ್ರಹಿಸಿಯಾರೆ ?



# ನಿನಗೆ ಬೇಕೇ ಮಧುಸುಧಾರಸ ?

ಎಲ್ಲಿ ನೋಡುವೆ ಏತಕೋಡುವೆ ಓ ಅನಂತದ ಯಾತ್ರಿಕ ? ।
ಎಲ್ಲಿಯೂ ಸಿಗಲಿಲ್ಲವೇ ಅವ ಮರೆತ ಏನು ಪಥತ್ರಿಕ ॥ ೧ ॥

ಎಲ್ಲಿಯೂ ಅವನಿಲ್ಲದೆಡೆಯೇ ಇಲ್ಲ ನೀನಿದನಾಲಿಸು ।
ಎಲ್ಲಿ ನೋಡಲು ಬೇಕೊ ಅಲ್ಲಿಯೆ ನೋಡು ಮತಿಯನು ಪಾಲಿಸು ॥ ೨ ॥

ಅಣು–ಅಣುವಿನಲಿ ಅಣುವಿನಿಂ ಹೊರಗಡೆಯು ಅವನಿಹ–ಸತ್ಯವೈ ।
ಕುಣಿಪುದಾದೊಡೆ ತೋರವಾದುದು ಸೂಕ್ಷ್ಮಬೇಕು–ಅಗತ್ಯವೈ ॥ ೩ ॥

ಸೂಕ್ಷ್ಮತಮನಿಹ ಸೂಕ್ಷ್ಮತರನಲಿ ಸೂಕ್ಷ್ಮ ಅಣು–ಸಂಘಾತವು ।
ಸೂಕ್ಷ್ಮತರದಲಿ ಇಲ್ಲವಾಗಿದೆ. ಇಲ್ಲವೈ ವಿನಿಪಾತವು ॥ ೪ ॥

ಆದ ಕಾರಣ ಆಗಿ ಒಳಮುಖ ನೋಡು ಅಂತಃಕರಣದಿ ।
ಆ ದಯಾಮಯ ಮನದ ಕಣ್ಣಿಗೆ ಕಾಣ್ಬ ಗೂಢವಿಕರಣದಿ ॥ ೫ ॥

ಸಾಕು ಅಲೆದುದು ಬೇಕು ಉಳಿದುದು ಮುಗ್ಧ! ಒಳಗೇ ಈಕ್ಷಿಸು ।
ಜೋಕೆ ! ಮೊದಲಲಿ ಶುದ್ಧಿಗೋಸುಗ ಅಂತರಂಗ ಪರೀಕ್ಷಿಸು ॥ ೬ ॥

ಆತ್ಮಶೋಧನ ಮೂಲಬೋಧನ ಸ್ಮರಿಸು ನೀನೀ ಮಾತನು ।
ಸ್ವಾತ್ಮತಾಪಣ ನಿನಗಿರಲಿ ಕಣ ಆಗ ಸಿಕ್ಕುವನಾತನು ॥ ೭ ॥

ನಿನಗೆ ಬೇಕೇ ಮಧುಸುಧಾರಸ ? ಭೋಗದಾಸೆಯ ವರ್ಜಿಸು ।
ಕೊನೆಗೆ ದಕ್ಕುವ ದಗೆಯ ಕುಕ್ಕುವ ನಲಿವ ನೆಲೆ–ಅದನರ್ಜಿಸು ॥ ೮ ॥

ಪಥತ್ರಿಕ = ಜ್ಞಾನಕರ್ಮೋಪಾಸನಾತ್ರಯ
ತೋರವಾದುದು = ಸ್ಥೂಲವಾದ ಪ್ರಕೃತಿ (ಕಾರಣರೂಪಿಣಿ)
ಗೂಢವಿಕರಣದಿ = ಗುಪ್ತವಾದ, ಇಂದ್ರಿಯಗಳು ಮೇಲಣ ಸಮಾಧಿ
ಸೂಕ್ಷ್ಮತಮ = ಈಶ್ವರ. ಸೂಕ್ಷ್ಮತರ = ಜೀವ. ಸೂಕ್ಷ್ಮ = ಕಾರಣಪ್ರಕೃತಿ
ಸ್ವಾತ್ಮತಾಪಣ = ಪರಮಾತ್ಮನು ತನ್ನ ಆತ್ಮನೆಂಬ ದೃಢಭಾವ
ನಲಿವ ನೆಲೆ = ಆನಂದದ ಸ್ಥಾನ

# ನೀ ಗೆಲ್ದುದೇನಿಲ್ಲ ! ಗರ್ವಬೇಡ !

ನಾ ಮನದ ರಾಜ ಕಾಮವಗೆಲ್ದೆ ನೆನಬೇಡ ।
ಕಾಮವಡಗಿಸಿಕೊಂಡಿಹುದು ಎನಿತು ಕೇಡ ? ॥ ೧ ॥

ಗಂಧರಸರೂಪಗಳ ಶಬ್ದಸ್ಪರ್ಶವನೆಲ್ಲ ।
ಎಂದೊ ಗೆದ್ದಿಹೆನೆಂಬ ಧೀರ ಸಿಗನಲ್ಲ ॥ ೨ ॥

ಕೆಟ್ಟದೆನ್ನಯ ಸನಿಯ ಸುಳಿಯದೆನ್ನುವೆ ಏಕೆ ? ।
ಕೆಟ್ಟದರ ತಿಳಿವು ನಿನಗಿರಲೆಯೇ ಬೇಕೆ ॥ ೩ ॥

ಮಿತ್ರವರ ! ಎಲ್ಲವನು ಗೆಲಬಹುದು ಅದು ಸಾಜ ।
ಚಿತ್ರಾತಿ ಚಿತ್ರನೈ ಈ ಸ್ಪರ್ಶರಾಜ ॥ ೪ ॥

ಗಾಳಿಗುಣ ಬಣ್ಣನಕೆ ಬಹು ಸುಲಭ ಸಂಯಮಿಯೆ ।
ತೇಲಿ ಹೋಗುಪ ಬಲ್ಮೆ ಏನು ಕಡಿಮೆಯೆ ॥ ೫ ॥

ಪಂಚಭೂತಾತ್ಮಕ ಇಂದ್ರಿಯಗಳ ಗಂಧ-ರಸ-ರೂಪ-ಸ್ಪರ್ಶಗಳೆಂಬ ವಿಷಯಗಳನ್ನು ಗೆದ್ದಿರುವೆನೆಂಬವರ ಸಂಖ್ಯೆ ಕಡಿಮೆಯಿಲ್ಲ. ಆದರೆ-ಗೆದ್ದಿರುವರೆಷ್ಟು ಜನ?

ಬಹು ಮಂದಿಗಳು ಅರಿಯದ, ಆದರೆ-ಅತಿಕಷ್ಟತಮನಾದ ವಿಜಯ ಕಾಮವಿಜಯ! ಕಾಮ ಸ್ತ್ರೀ-ಪುರುಷ-ಸಂಗದಾಸೆ ಸ್ಪರ್ಶದ ವಿಷಯ-ಎಂದು ಯೋಚಿಸಬಲ್ಲವರೂ ಕಡಿಮೆಯೇ!

1924ರ ಇಸವಿ. ಪ್ರಾತಃಸ್ಮರಣೀಯ ಪೂಜ್ಯವಾದ ಆತ್ಮಬಲಿದಾತಾ ಶ್ರೀ ಸ್ವಾಮೀ ಶ್ರದ್ಧಾನಂದರು ಹಳೆಯ ಕಾನಕಾನಹಳ್ಳಿ (ಕನಕಪುರ) ರಸ್ತೆಯ ಬಾಡಿಗೆ ಮನೆಯಲ್ಲಿದ್ದ ಆರ್ಯ ಸಮಾಜದಲ್ಲಿ ನಮ್ಮ ಆಪ್ತಮಿತ್ರರೊಬ್ಬರಿಗಿತ್ತ ಉಪದೇಶದ ಭಾವಾನುವಾದವಿದು! ಛಾಯಾನುವಾದವೆಂದಾದರೂ ಸರಿಯೇ.

---

ಕೊನೆಯತನಕ ಮಾನವ ಸಾಧಕನೇ; ಸಿದ್ಧನಲ್ಲ !೦



# ಆಸರೆಯನು ನೀಡು ನಾಥ ಸರ್ವಲೋಕಧಾರೀ!

೧

ಅತ್ತ ಇತ್ತ ಸುತ್ತಿಸುತ್ತಿ ಮತ್ತನಂತೆ ಜನರ ಮುತ್ತಿ ।
ಚಿತ್ತಶಕ್ತಿಯೆಲ್ಲ ಬತ್ತಿ ನೊಂದೆನೈ ಅಘಾರೀ ॥

೨

ಅಲೆದು ಅಲೆದು ಸೋತು ಹೋದೆ ನಿನ್ನ ಮಾತ್ರ ಕಾಣದಾದೆ ।
ನೆಲೆಯ ಸಿಗದೆ ಆರ್ತನಾಗಿ ಕರೆದೆ ಬಾರಿ ಬಾರಿ ॥

೩

ಒಂದು ಜಾಗ ಮಾತ್ರ ಬಿಟ್ಟೆ ಮತ್ತದೆಲ್ಲೊ ಚಿತ್ತವಿಟ್ಟೆ ।
ಮಂದಬುದ್ಧಿಗೊಂದು ನಿಟ್ಟೆ ? ಸೋಲ್ದೆ ಕಾವೆ ಅರಿ ॥

೪

ಬೇರೆ ಬೇರೆ ತಾಣದಲ್ಲಿ ಸ್ಥೂಲ ಜಗದ ರೂಪದಲ್ಲಿ ।
ಊರಿ ಕೋಲ ನಿಂತೆನಲ್ಲಿ ನೀಳ ಸೂಯ್ಲು ಕಾರಿ ॥

೫

ವ್ಯಾಪ್ಯತತ್ವವದುವೆ ಬೇರೆ ವ್ಯಾಪಕನವ ತಾನೆ ಬೇರೆ ।
ಆಪ್ಯ ಇದನು ತಿಳಿಯದಾದೆ ಮುಗ್ಧ ದೇಹಧಾರಿ ॥

೬

ಈಗ ಕಂಡೆ ತಂದೆ ಗುಟ್ಟ ನನ್ನ ಒಳಗೆ ನೀನು ಇರ್ಪೆ ।
ಬಾಗಿ ಮಣಿವೆ ಬೆಳಕ ನೀಡು ಚೇತನಾವಿಹಾರೀ ॥

೭

ಒ ಸುಧಾಪಯೋಧಿ ಜಗದ ಮೋಹದಿಂದ ದೂರ ಬಂದೆ ।
ಆಸರೆಯನು ನೀಡು ನಾಥ ಸರ್ವ ಲೋಕಧಾರೀ ॥

# ಎತ್ತಲೋ ಹುಡುಕಾಡುವೆ ?

ಅತ್ತ ನೋಡುವೆ ಇತ್ತ ನೋಡುವೆ ಎತ್ತಲೋ ಹುಡುಕಾಡುವೆ ?
ಕತ್ತಲಲಿ ತಡಕಾಡುತಿರ್ದಪೆ ಬರಿದೆ ಏಕಡ್ಡಾಡುವೆ ॥

ಎತ್ತ ಹುಡುಕಲು ಬೇಕೊ ಆ ಕಡೆ ನಿನ್ನ ಚಿತ್ತವು ಓಡದು ।
ಎತ್ತಲವನೋ ಎತ್ತ ನೀನೋ ಲೋಕವದ ತಾ ನೋಡದು ॥

ಕಲ್ಲಿನಲ್ಲಿಹ ಮಣ್ಣಿನಲ್ಲಿಹ ಕಾಷ್ಠದಲ್ಲಿಹ ಮಾನವ ।
ನಿಲ್ಲಿಸಾತ್ಮನ ಅಲ್ಲೆ ಕಾಣುವೆ ಕಂಡು ಬಂದಪನಾ ನವ ॥

ಎಂದು ಬೋಧಿಪರೆಷ್ಟು ಜನರೋ ? ಸೋಲದಿರು ನೀ ಚೇತನ ।
ಒಂದು ವ್ಯಾಪಕ ವ್ಯಾಪ್ಯ ಬೇರದು ವ್ಯಾಪಿ ವಿಶ್ವವಿಚ್ಚೇತನ ॥

ಮೋಸಹೋಗದಿರು ವ್ಯಾಪ್ಯ ವ್ಯಾಪ್ಯವೆ ! ಹೊರಗನರ್ಚಿಸೆ ಸಲ್ಲದು ।
ದಾಸ ! ಒಳಹೋಗು ಒಳಗ ಧೇನಿಸು ಬಾಹ್ಯವ್ರೋ ? ಬರಿಕಲ್ಲದು ॥



# ಗೆಲ್ಲದಿದ್ದರು ಗೆಲವು ನನ್ನದಾಗಿರಲಿ

೧

ಏನು ನೀ ಕೊಡಲಿಲ್ಲವೆಂದು ನಾ ಬಳಿ ಬಂದೆ ?
ನೀನೇನನಿತ್ತಿಲ್ಲ ? ನೆಲವೇನು ಜಲವೇನು ಗಾಳಿಯೊಂದೇ ?

೨

ಏತರಲಿ ಏನಿಲ್ಲ ? ಯಾವ ಸಂಪತ್ತಿಲ್ಲ ? ಎಲ್ಲಿಲ್ಲವೈ ಭಾಗ್ಯ ?
ಕಾತರಿಪೆ ನಾನೇಕೆ ದಾರಿದ್ರ್ಯವೆಲ್ಲಿಹುದು ? ಎಂಥ ವೈರಾಗ್ಯ ॥

೩

ಅಹುದಹುದು ಈಗರಿತೆ ಎಲ್ಲವಿದ್ದೂ ಕೂಡ ಏನೊ ಇಲ್ಲ ।
ಇಹುದನೆಲ್ಲವ ಗೆಲ್ದ ಸೋತೆನೆಂದೊಡೆ ಮಾತ್ರ ಶಾಂತಿಯಿಲ್ಲ !

೪

ಜಗಕೆಲ್ಲ ನಾನೆ ದೊರೆ; ನನಗೆ ನಾ ಬರಿದಾಸ ।
ನಗರೆ ಜನ ? ಇದು ಜಯದ ವಿರಸ ಹಾಸ ॥

೫

ಎಲ್ಲ ಹೋಗಲಿ ಸುಧಾಂಬುಧಿ ಬತ್ತದೇ ಇರಲಿ ।
ಗೆಲ್ಲದಿದ್ದರು ಗೆಲವು ನನ್ನದಾಗಿರಲಿ ॥

# ಒಳಗಿರಲು ನೈರ್ಮಲ್ಯ ಆರಿಂದಲೇನು ಭಯ ?

ನೀನೇನನಿತ್ತಿಲ್ಲ ಎನ ಜೀವನೆ ತಂದೆ ?
ಏನ ಕೇಳಲಿಕೆಂದು ನಿನ್ನ ಬಳಿ ಬಂದೆ ? ॥ ೧ ॥

ನೀನಧಿಕ ಕೊಡಲೊಲ್ಲೆ ನಾ ಕಡಿಮೆಯನ್ನೊಲ್ಲೆ ।
ಜ್ಞಾನಧನ ನಿನ್ನ ಆರ್ಪಿಗೆ ಎದುರು ಸೋಲ್ಲೆ ? ॥ ೨ ॥

ಅರಿಗೇನೀಯಬೇಕೋ ನಿನಗೆಯೆ ಅದು ಗೊತ್ತು ।
ಬೇರೆ ಮತ್ತಿಷ್ಟು ಬೇಡಲಾರದ ಸೊತ್ತು ॥ ೩ ॥

ಎಂತೊ ಯಾವುದೊ ನನಗೆ ಹೆಚ್ಚೆಯೇ ಪ್ರಭು ಸಿಕ್ಕೆ ।
ಅಂತರದ ಹೊರೆಯೆ ಅದು ಯಾಕದರ ಭಿಕ್ಕೆ ? ॥ ೪ ॥

ಆಗ ನಾ ಮೈಮರೆದು ಪರರ ವಂಚಿಸೆ ಕಾಂತ ।
ಜಾಗರಿಸು ದಂಡನೆಗೆ ಗುರಿಮಾಡು ಶಾಂತ ॥ ೫ ॥

ಹೊರ ಶತ್ರುಗಳ ಗುರುತಿಸಲು ಬಹಳವಿದೆ ಯುಕ್ತಿ ।
ಕರುಣಿಸೊಳಶತ್ರುಗಳ ಗುರುತಿಸುವ ಉಕ್ತಿ ॥ ೬ ॥

ಒಳಗಿರಲು ನೈರ್ಮಲ್ಯ ಆರಿಂದಲೇನು ಭಯ ?
ಹೊಳೆ ಹೊಳೆಯುವಾತ್ಮಕಾಂತಿಯೆ ನಿತ್ಯ ವಿಜಯ ॥ ೭ ॥

ಮಾ ಪ್ರ ಗಾಮ ಪಥೋ ವಯಂ ಮಾ ಯಜ್ಞಾದಿಂದ್ರ ಸೋಮಿನಃ ।
ಮಾಂತಃ ಸ್ಥುರ್ನೋ ಅರಾತಯಃ ॥ (ಋಕ್ ೧೦.೫೭/೧) ಮಂತ್ರದ ಭಾವಾನುವಾದ



# ತಾ ಸರಿದು ಹೊರಬರಲಿ ಹೊಸದೊಂದು ಹಾಡು

ನಿನ್ನ ಬಿಟ್ಟಿನ್ನಾರ ಮೊರೆಹೊಗಲಿ ಓ ತಂದೆ ?
ನಿನ್ನ ದಾನವ ಮರೆತು ಏತಕೋ ಬಂದೆ ॥

ನೀನಿತ್ತುದೆಲ್ಲ ನಿಜವಾಗಿಯೂ ಬಹುರೂಪ ।
ನಾನದಂ ತುಂಬಿಕೊಳಲಾರದಿಹ ಕೂಪ ॥

ನನ್ನ ಕಾಮನೆಯೊಂದು ತೀರದೇ ಹೋದಲ್ಲಿ ।
ಎನ್ನ ಮನ ತಣಿಯದಿರೆ–ಕೊನೆ ದುಃಖದಲ್ಲಿ ॥

ಸರ್ವೋತ್ತಮೈಶ್ವರ್ಯ ನೀನೆಯೇ ಭಗವಂತ ।
ಸರ್ವಾಂತಃ ಸಾಕ್ಷಿ! ನೀನೋ ಅನಂತ ॥

ಎಲ್ಲವೂ ಸಿಕ್ಕಿಯೂ ನೀನೊಬ್ಬ ಸಿಕ್ಕದಿರೆ ।
ಎಲ್ಲ ಮೃಗತೃಷ್ಣೆಯೇ ವಿಶ್ವ ನಿನಗಿದಿರೆ ॥

ಇಂಬುಗೊಡು ಈ ಮೊರೆಗೆ, ಎನ್ನಂತರಂಗದಲಿ ।
ತುಂಬಿ ತುಳುಕೈ ನೀನೆ ! ಬರಿಯತನ ಕದಲಿ ॥

ಓ ಸುಧಾಸಾಗರನೆ ! ಅಮೃತವರ್ಷಣ ಮಾಡು ।
ತಾ ಸರಿದು ಹೊರ ಬರಲಿ ಹೊಸದೊಂದು ಹಾಡು ॥

"ತುಂಜೇ ತುಂಜೇಯ ಉತ್ತರೇ" (ಋಕ್:- ೧. ೧.೭) ಎಂಬ ಮಂತ್ರದ ಭಾವಾನುವಾದ.
ಮೃಗತೃಷ್ಣ = ಬಿಸಿಲ್ಗುದುರೆ, ಮೃಗ ಮರೀಚಿಕೆ
ವಿಶ್ವ ನಿನಗಿದರೆ! = ಬ್ರಹ್ಮಾಂಡ ನಿನಗೆ ಎದುರೇ ? ಸಮವೇ ?
ಬರಿಯತನ = ಅಭಾವ
ಕದಲಿ = ನಾಶವಾಗಿ

# ಭರ್ತನಿರ್ಪ ನಡೆಯೋ ಮಲ್ಲ! ಯತ್ನವಾನ್ ವಿರಾಗೀ!

ಏನೊ ಕೇಳಲೆಂದು ಬಂದೆ ನಿನ್ನ ಸನಿಯ ಎನ್ನ ತಂದೆ ।
ಏನು ಬೇಡಲಯ್ಯ, ಒಂದೆ ? ತಿಳಿಯಲಾರೆ ಎಷ್ಟು ನೊಂದೆ ನಾ ವಿನೀತನಾಗಿ ॥

ನೀನು ಕೊಡದ ವಸ್ತುವೇನು ನಾನು ಬರಿದೆ ಚಿಂತಿಸೇನು ।
ದಾನಿ! ಗುಟ್ಟಬಲ್ಲೆನೇನು ? ದಾನವೆಲ್ಲ ಸಿಹಿಯ ಜೇನು–ಒರೆವೆ ಸಿರವ ಬಾಗಿ ॥

ನನ್ನ ಹೃದಯ ನಿನ್ನದೇನೆ, ನನ್ನ ಚಿತ್ತ ನಿನ್ನದೇನೆ ।
ನನ್ನದೆಲ್ಲ ಸ್ವಪ್ನಸೇನೆ, ಬನ್ನ, ಶೂನ್ಯಸ್ಪಷ್ಟಬೇಗೆ–ನಾನೋ ಮುಗ್ಧರಾಗೀ ॥

ಈವೆನೇನ ಅರಿಯೆನಲ್ಲ! ಆವ ನಿನಗೆ ಕೊಡಲು ಬಲ್ಲ ?
ಜೀವ ದಾತೃವಲ್ಲವಲ್ಲ! ಭಾವಗರ್ವಸಲ್ಲದಲ್ಲ – ಈಶ್ವರಾನುರಾಗೀ ॥

ಇಂದ್ರ! ಇಂದ್ರಿಯೇಶನಾಗು ತಂದ್ರಿಲತೆಯ ತಳ್ಳಿಸಾಗು ।
ಮಂದ್ರ! ನಿನ್ನ ಗುರಿಯ ತಾಗು ಸಾಂದ್ರಚಿತ್ತ! ವಿಭುಗೆ ಬಾಗು–ಸಿರವ ಶಾಂತನಾಗಿ ॥

ಮರ್ತ್ಯನೇನು ಮಾಡಬಲ್ಲ? ಕರ್ತನೆದುರು ಅವನು ಸಲ್ಲ
ಧರ್ತ ಕೈಯ ಬಿಡುವನಲ್ಲ ಭರ್ತನಿರ್ಪನಡೆಯೊ ಮಲ್ಲ–ಯತ್ನವಾನ್ ವಿರಾಗೀ ॥

ಒದಗಿ ಬರಲಿ ಸುಧೆಯ ಪಾನ ಮುದದಿ ಕೊಳ್ಳು ಆತ್ಮದಾನ
ಸದಯದೇವನೆರೆವ ಮಾನ ಉದಿಸಿ ಬರಲಿ ಸಾಮಗಾನ–ಭಕ್ತಿ ಭಾಗ್ಯವಾಗಿ ॥

ವಿನೀತ = ವಿನಯಶಾಲಿ, ದಾನವೆಲ್ಲ ಸಿಹಿಯಜೇನು = ಪರಮಾತ್ಮನಿಮ್ಮದೆಲ್ಲ ಅತಿಮಧುರ.
ಮುಗ್ಧರಾಗೀ = ಮೈಮರೆತ ಅಸತ್ಕ, ಜೀವದಾತನಲ್ಲವಲ್ಲ = ಜೀವನು ಕೊಡುವವನಲ್ಲವಲ್ಲ.
ಭಾವಗರ್ವ = ಭಾವನೆಯ ಹೆಮ್ಮೆ, ಈಶ್ವರಾನುರಾಗೀ = ಭಗವಂತನ ಪ್ರೇಮಿ.
ಇಂದ್ರಿಯೇಶನಾಗು = ಜಿತೇಂದ್ರಿಯನಾಗು, ತಂದ್ರಿಲತೆ = ಅರೆನಿದ್ದೆಯ ಮೊಬ್ಬು.
ಮಂದ್ರ = ಅನಂದವಂತ, ಸಾಂದ್ರಚಿತ್ತ = ನೆನೆದ ಮನಸ್ಸುಳ್ಳವನೇ.
ಧರ್ತ = ಧಾರಕಪರಮಾತ್ಮ, ಭರ್ತ = ತುಂಬಿಕೊಡುವ ಭಗವಂತ.



# ಜೈಸು ಏಳು ಮುಗ್ಧಜೀವ ! ಅವನು ದೂರಭಿನ್ನನೇ ?

೧

ಅತ್ತ–ಇತ್ತ ಸುತ್ತಮುತ್ತ ಸುತ್ತುತಿರುವೆ ಏತಕೆ ?
ಎತ್ತ ಬೇಕೋ ಅತ್ತ ಇಲ್ಲ ಮತ್ತೆ ಸುತ್ತಿದೇತಕೆ ?

೨

ಎಲ್ಲ ಕಡೆಯು ಒಳಗು–ಹೊರಗು ನಾಥನಿರ್ಪ ಸತ್ಯವೇ ।
ಭುಲ್ಲವಿಸುವ ಬಾಹ್ಯದಲ್ಲಿ ಅರಸುವುದು ಅಗತ್ಯವೇ ? ॥

೩

ಜ್ಞಾನಧನರು ಮಾನಿಜನರು ಅವನು ಒಳಗೆ–ಎಂಬರು ।
ಏನು ಗುಹ್ಯ ? ಏನು ಬಾಹ್ಯ ? ಕೊಂಚ ಚಿಂತಿಸೆಂಬರು ॥

೪

ಸ್ಥೂಲ ಬಾಹ್ಯ ಸೂಕ್ಷ್ಮಜೀವ ಸೂಕ್ಷ್ಮನೇ ! ಅಪೇಕ್ಷಿಸು ।
ಸ್ಥೂಲ ಬಿಟ್ಟು ಸೂಕ್ಷ್ಮನಲ್ಲಿ ಸೂಕ್ಷ್ಮತರನನೀಕ್ಷಿಸು ॥

೫

ಜೀವನಲ್ಲಿ ಭೂತವಿಲ್ಲ. ಇರ್ಪನೊಬ್ಬನೇ ಹರಿ ।
ದೇವನನ್ನು ಗುರುತಿಸಲ್ಲೆ ಜೀವಪಥವಿದೇ ಸರಿ ॥

೬

ಆ ಪ್ರಕಾಶಪುಂಜ ಮೆರೆವ ಅಂತರಂಗದಲ್ಲಿಯೇ ।
ಓ ಪ್ರಿಯಾತ್ಮ ! ಅಲೆಯಬೇಡ, ಕಾಣು ಅವನನಲ್ಲಿಯೇ ॥

೭

ಆ ಸುಧಾಪಯೋನಿಧಾನ ಕರೆಯುತಿರ್ಪ ನಿನ್ನನೇ ।
ಜೈಸು, ಏಳು, ಮುಗ್ಧಜೀವ ! ಅವನು ದೂರಭಿನ್ನನೇ ? ॥

ಎತ್ತ ಬೇಕೊ ಅತ್ತ ಇಲ್ಲ = ನೋಡಬೇಕಾದ ಕಡೆಯಿಲ್ಲ
ಭುಲ್ಲವಿಸುವ ಬಾಹ್ಯದಲ್ಲಿ = ಅಟ್ಟಹಾಸಮಾಡುವ ಹೊರಜಗತ್ತಿನಲ್ಲಿ
ಸೂಕ್ಷ್ಮನಲ್ಲಿ = ಜೀವನಲ್ಲಿ, ಸೂಕ್ಷ್ಮತರನ = ಪರಮಾನನ್ನು
ದೂರಭಿನ್ನನೇ = ದೂರದಕಾರಣ ಬೇರೆಯಾದವನೇ =
“ವೇನಸ್ತತ್ಪಶ್ಯನ್ನಿಹಿತಂ” (ಯಜುಃ- ೩.೨.೮) ಮಂತ್ರದ ಭಾವಾನುವಾದ

# ಬೀಸು ತಣ್ಪನು ಬೆಳಕಿನೊಣ್ಪನು!

ಹೇ ಅಖಂಡನೆ! ಸರ್ವಮಿತ್ರನೆ! ಜೀವವದ್ವರಣೀಯನೇ!
ಹೇ ಅಖಿಲಜಗದಂತರಾತ್ಮನೆ! ಸರ್ವ ಜೀವರ ಜೀಯನೇ ॥

ನಿನ್ನ ಗುಣಗಳ ನಾಶ್ರಯಿಪಜನ ನಿಜಕು ತಾವನವದ್ಯರೇ ।
ನಿನ್ನ ಸಾಧಕ ವೃಂದರವದಿರು ಸರ್ವಥಾಪ್ರತಿಪದ್ಯರೇ ॥

ಆದರೇಂ ಪ್ರಭು! ಜಗದಿ ಜೀವನು ರೂಪದಿಂದಣುಚೇತನ ।
ಗೈದರುಂ ಕಮುಸಾಧನೆಯನವ ಅಲ್ಪಶಕ್ತಿನಿಕೇತನ ॥

ನಿನ್ನ ಸದೃಶರದಾರು ಓ ವಿಭು! ಸರ್ವವಿಧ ಮೇಧಾವಿಯೇ ।
ಸನ್ನುತಾತ್ಮನೆ! ಅನ್ಯರಾರ್ಭಟ ಬರಿಯ ತವವಟ ಆವಿಯೇ ॥

ಓ ಸಕಲ ವಿಜ್ಞಾನ ಸಾಗರ! ಇಂದ್ರ! ಓ! ದ್ಯುತಿಯಾಗರ ।
ಶ್ವಾಸ ನೀ ಬ್ರಹ್ಮಾಂಡವೆಲ್ಲಕೆ ನೀನೊ! ಶಾಶ್ವತ ಜಾಗರ ॥

ಬಾಳಿನೆಲ್ಲೆಡೆ ಥಳಥಳಿಪ ತಿಳಿ ಬೆಳಕನೆರೆಯೈ ದೇವನೇ ।
ಬೀಳಗೊಡದಿರು ತಮದಲೆಮ್ಮನು ದಕ್ಕಲೊಲರಿವಿನ ಸೇವನೆ ॥

ಓ ಸುಧಾಂಬುಧಿ! ಅಮರತಾನಿಧಿ ಸುರಿಸು ಕರುಣಾವರ್ಷಣ ।
ಬೀಸು ತಣ್ಪನು ಬೆಳಕಿನೊಣ್ಪನು ತೀರೆ ತಿಮಿರದ ಘರ್ಷಣ ॥

ಜೀವವದ್ವರಣೀಯನೇ = ಜೀವ ಜಗತ್ತಿಗೆ ಜೀವದಂತೆಯೇ ಬೇಕಾದವನೇ !
ಜೀಯನೇ = ಸ್ವಾಮಿಯೇ! ಅನವದ್ಯರೇ = ಕುಂದಿಲ್ಲದ ಪವಿತ್ರರೇ ಸರಿ.
ಅವದಿರು = ಅವರು. ಪ್ರತಿಪದ್ಯರೇ = ಹೊಂದುಲರ್ಹರೇ ಸರಿ.
ಅಣುಚೇತನ = ಅಲ್ಪಚೇತನ. ಅಲ್ಪ ಶಕ್ತಿ ನಿಕೇತನ = ಸ್ವಲ್ಪ ಶಕ್ತಿಯ ಮನೆಯೇ.
ವಿಭು = ಸಾರ್ವವ್ಯಾಪಕ. ಸರ್ವವಿಧ ಮೇಧಾವಿಯೇ = ಎಲ್ಲ ಬಲ್ಲ ಸರ್ವಜ್ಞನೇ.
ದ್ಯುತಿಯಾಗರ = ಬೆಳಕಿನ ನೆಲೆ. ಶಾಶ್ವತ ಜಾಗರ = ನಿತ್ಯಜಾಗರೂಕ.
ದಕ್ಕಲರಿವಿನ ಸೇವನೆ = ಜ್ಞಾನದ ಸೇವನೆ ಲಭಿಸಲಿ.
ಕರುಣಾವರ್ಷಣ = ದಯೆಯ ಮಳೆ. ತಿಮಿರದ ಘರ್ಷಣ = ಕತ್ತಲೆಯ ತಿಕ್ಕಾಟ.
ಋಗ್ವೇದದ ಮಂತ್ರ (೨. ೨೭. ೧೪)ದ ಭಾವಾನುವಾದ; ಛಾಯಾನುವಾದವೆಂದರ ಆದೀತು.



# ಅಳುಕೆ ಸಾವು ಹುರುಪೆ ವಿಜಯ

೧

ಸೋಲು-ಗೆಲವು ಅರಿಗಿಲ್ಲ ? ಸೋತು ಕೂಡ ಗೆದ್ದನಲ್ಲ ।
ಏಳು-ಬೀಳು ತಪ್ಪದಲ್ಲ ಬಿದ್ದಮನುಜ ಎದ್ದನಲ್ಲ ॥

೨

ಅಳುಕೆ ಸೋಲು ಹುರುಪೆ ವಿಜಯ ಇದನು ಅರಿತು ಧಾವಿಸು ।
ಅಳುವಿದೇಕೆ ಅಳುಕಿದೇಕೆ ? ಗುರಿಯದೇನು ಭಾವಿಸು ॥

೩

ನಿತ್ಯ ವಿಜಯಿ ದೇವನಾಥ ಅಂಜಿದೇಕೆ ಮಿತ್ರನೇ ।
ಸತ್ಯವಿದನು ಮರೆಯಬೇಡ ಮಿತ್ರನಾ ಪವಿತ್ರನೆ ॥

೪

ಶಕ್ತಿ ನಿಧಿಯೆ ಸುತ್ತಮುತ್ತ ನಿನ್ನಅರ್ಪನಲ್ಲವೇ ।
ರಿಕ್ತ ಬಲನೆ ನೀನು ಜೀವ! ದೇವ ದುರ್ಗವಲ್ಲವೇ ॥

೫

ಸುಧೆಯ ತುಂಬಿ ಎರೆವದೇವ ಮತ್ತದಾವ ಭೀತಿಯೋ ।
ಪ್ರಧನವದೆಯೆ ನಿನ್ನದಾಗೆ ಮಂತ್ರದಾವ ಈತಿಯೋ ? ॥

ನಿತ್ಯ ವಿಜಯಿ = ಅಪರಾಜಿತ ಪರಮಾತ್ಮ. ಕಳುವು = ಹುಸಿನೆನಹು.
ಶಕ್ತಿ ನಿಧಿ = ಬಲಧ ಕೋಶ ಭಗವಂತ. ರಿಕ್ತ ಬಲ = ಶಕ್ತಿ ಕಳೆದುಕೊಂಡವನು.
ದೇವ ದುರ್ಗ = ಭಗವಂತನೇ ದುರ್ಗಮವಾದ ಕೋಟೆ.
ಪ್ರಧನ = ಮೋಕ್ಷವೆಂಬ ಉತ್ತಮೈಶ್ವರ್ಯ. ಈತಿ = ಮಾನಸಿಕ ರೋಗ.
"ಪ್ರೇತಾ ಜಯತಾ ನರಃ" ಎಂಬ (೩. ೧೯. ೭") ಎಂಬ ಅಥರ್ವ ಮಂತ್ರದ ಆಧಾರ.

# ನಿನ್ನ ದಾನಕಂತವಿಲ್ಲ ನನ್ನ ಸನಿಯ ನುಡಿಯೆ ಇಲ್ಲ

೧

ಇಷ್ಟು ನನ್ನ ಅಪ್ಪನಿತ್ತ ಇಷ್ಟು ನನ್ನ ತಾತನಿತ್ತ ।
ಇಷ್ಟು ನನ್ನ ಅಜ್ಜನಿತ್ತ ಇಷ್ಟಿದೆಲ್ಲ ನನ್ನ ವಿತ್ತ ॥ ಎಂದು ಮೆರೆದೆನು ॥

೨

ಎಂದು ಎಲ್ಲರೆದುರು ಮರೆದೆ ಟಂಕಸಾಲೆಯನ್ನೆ ತೆರೆದೆ ।
ಮಂದಿ ಮೆಚ್ಚಿಕೊಳ್ಳುವಂತೆ ನನ್ನ ಬೆನ್ನ ನಾನೆ ಕೆರೆದೆ ॥ ಉಬ್ಬಿ ಹೆರೆದೆನು ಮೆರೆದೆನು ॥

೩

ಆದರೇನು ಇಂದ್ರದೇವ ! ಎಲ್ಲವಿದ್ದು ಏನು ಇಲ್ಲ ।
ತೇದುದನ್ನೆ ತೆಯ್ದೆನಷ್ಟೆ ! ಕಾಸಿನಷ್ಟು ಕೇಳ್ವರಿಲ್ಲ ॥ ಎಂದು ತೆರೆದೆನು ॥

೪

ನಿನ್ನ ಮಣ್ಣು ನಿಜಕು ಹೊನ್ನು ನಿನ್ನ ಗಾಳಿ ಉಸಿರ ಬೆನ್ನು ।
ಇನ್ನನಂತ ಗಗನ ನೀರು – ಎಲ್ಲಕಿಂತ ಬಹಳ ಚೆನ್ನು ॥ ಎಂದೆ ಬೆರೆದೆನು ॥

೫

ಕಣದಿ ಕಣದಿ ಹಣದ ಒರತೆ ? ಇಲ್ಲಿ ಆರಿಗೇನು ಕೊರತೆ ?
ಎಣಿಸಲಾರೆ ಗಣಿಸಲಾರೆ ನರನ ಲೋಭ ನಿನಗೆ ಹೊರತೆ ? ॥ ಎಂದು ಜರೆದೆನು ॥

೬

ಹೊಂಚಿ ತಿಂಬ ಆಸೆಯುಂಬು ಹಂಚಿಕೊಳುವ ಭಾವ ಸೊನ್ನೆ ।
ಮುಂಚಿನಂಥ ಬಯಕೆ ಎಲ್ಲಿ ? ಈ ದುರಾಶೆಯೊಂದು ಹೊನ್ನೆ ॥ ಎಂದು ಕೆರೆದೆನು ॥

೭

ನಿನ್ನದಾನಕಂತವಿಲ್ಲ ನನ್ನ ಸನಿಯ ನುಡಿಯೆ ಇಲ್ಲ ! ।
ನಿನ್ನ ನುತಿಪ ಸುಧೆಯದೆಲ್ಲಿ ? ನಿನ್ನ ಪೆರ್ಮೆ ಕಂಡುದಿಲ್ಲ ॥ ಮೌನ ಮೆರೆದೆನು ॥

“ತುಂಜೇ ತುಂಜೇ ಯ ಉತ್ತರೇ ಸ್ತೋಮಾ ಇಂದ್ರಸ್ಯ ವಜ್ರಿಣಃ ॥ (ಋಕ್ :- ೧, ೭, ೭)
ಎಂಬ ಮಂತ್ರದ ನೆರಳಿನಲ್ಲಿ ಹೊಸೆದ ಹಸಿಗವನ ।



# ಉದಿಸಿ ಬರಲಿ ಸಾಮಗಾನ-ಭಕ್ತಿ ಭಾಗ್ಯವಾಗಿ!

ಏನೊ ಬೇಡಲೆಂದು ಬಂದೆ ನಿನ್ನ ಬಳಿಗೆ ಎನ್ನ ತಂದೆ ।
ಏನ ಬೇಡಲಯ್ಯ ಒಂದೆ ತಿಳಿಯಲಾರದಷ್ಟು ಕಂಡೆ–ನಾ ವಿಮುಗ್ಧನಾಗಿ ॥ ೧ ॥

ನೀನು ಕೊಡದ ವಸ್ತುವೇನು ? ನಾನೊ ಬಿಡದೆ ಬೇಡಿಯೇನು ।
ನಾನು ಎಣಿಸಬಲ್ಲೆನೇನು ? ನಿನ್ನ ದಾನವೆಲ್ಲ ಜೇನು–ಎಂಬೆ ನಮ್ರವಾಗಿ ॥ ೨ ॥

ನನ್ನ ಹೃದಯ ನಿನ್ನದೇನೆ ನನ್ನ ಚಿತ್ತ ನಿನ್ನದೇನೆ ।
ನನ್ನದೆಲ್ಲ ಸ್ವಪ್ನವೇನೆ ಸೊನ್ನೆಯಿಂದ ಬಂದ ಬೇನೆ–ನಾ ಪ್ರಮತ್ತನಾಗಿ ॥ ೩ ॥

ಈವನೇನ ಅರಿಯೆನಲ್ಲ ! ಆವ ನಿನಗೆ ಕೊಡಲುಬಲ್ಲ ? ।
ಜೀವ ದಾತೃವಲ್ಲವಲ್ಲ ಬರಿಯ ಬಿಂಕಸಲ್ಲದಲ್ಲ–ನಾ ಇಹಾನುರಾಗೀ ॥ ೪ ॥

ಸಲ್ಲದುದನು ಆಡಬೇಡ ತಂದುಕೊಳ್ಳಬೇಡ ಕೇಡ ।
ಭುಲ್ಲವಿಸದಿರಯ್ಯಸೇಡ ಕೇಳು ಆಗಬೇಡ ಬೇಡ–ಜೀವ ಮೇಲ್ಮೆಗಾಗಿ ॥ ೫ ॥

ಇಂದ್ರ ಇಂದ್ರಿಯೇಶನಾಗು ತಂದ್ರಿಲತೆಯ ತೊರೆದು ಸಾಗು ।
ಮಂದ್ರ! ನಿನ್ನ ಗುರಿಯ ತಾಗು ಸಾಂದ್ರಚಿತ್ತನಾಗಿ ಬಾಗು–ಹರಿಗೆ ಭದ್ರನಾಗಿ ॥ ೬ ॥

ಮರ್ತನೇನು ಮಾಡಬಲ್ಲ ? ಕರ್ತನೆದುರು ನಿಲ್ಲನಲ್ಲ ।
ಧರ್ತಕೈಯ ಬಿಡುವನಲ್ಲ, ಭರ್ತನಿರಲು ಭಯವೆ ಮಲ್ಲ–ಯತ್ನಿಸೈ ವಿರಾಗೀ॥ ೭ ॥

ಒದಗಿ ಬರಲಿ ಸುಧೆಯಪಾನ ಮುದದಿಕೊಳ್ಳು ದಿವ್ಯದಾನ ।
ಸದಯನೆರೆವ ನಿನಗೆ ಮಾನ ಉದಿಸಿ ಬರಲಿ ಸಾಮಗಾನ–ಭಕ್ತಿ ಭಾಗ್ಯವಾಗಿ॥ ೮ ॥

ಕಂದೆ = ಕಂದಿದೆ, ಬಾಡಿದೆ. ವಿಮುಗ್ಧ = ಅತಿಮೋಹಕ್ಕೆ ಸಿಕ್ಕಿದವ, ಮೂಢ. ಜೇನು = ಮಧುರ. ಸೊನ್ನೆಯಿಂದ ಬಂದ ಬೇನೆ = ಶೂನ್ಯಭಾವದಿಂದ ಹುಟ್ಟಿದ ರೋಗ. ಪ್ರಮತ್ತನಾಗಿ = ಪ್ರಮಾದಿಯಾದ ಆಶೆಬುರುಕ. ಆಗಬೇಡ ಬೇಡ = ಬೇಟೆಗಾರನಾಗಬೇಡ. ಇಂದ್ರ ಇಂದ್ರಿಯವಾನ್ ಜೀವ ತಂದ್ರಿಲತೆ = ಮೊಬ್ಬು. ಮಂದ್ರ = ಹರ್ಷಿತ. ಸಾಂದ್ರಚಿತ್ತ - ನೆನೆದ ಮನಸ್ಸಿನವನು. ಭದ್ರ = ಒಳ್ಳೆಯವ. ಮರ್ತ = ಮಾನವ. ಕರ್ತ = ಜಗಮುತ್ಪಾದಕ. ಧರ್ತ = ಧಾರಕ. ಭರ್ತ = ಪ್ರಭು. ಮಲ್ಲ = ಧೀರ.

## ಹಾಸು ನೆಲದ ಮೇಲೆ ನಗೆಯ ಹಾಸು ಅಸುಸಮೀರನೇ!

೧

ಹೃದಯ ತುಂಬಿ ದನಿಯ ನುಂಗಿ ನಿನ್ನ ಸನಿಯ ಬಂದಿಹೆ ।
ಸದಯ! ನೀನು ಇತ್ತುದೆಷ್ಟೊ ? ಮೌನ ತಂದಿಹೆ ॥

೨

ಕಹಿಯನುಂಡೆ ಸಿಹಿಯನುಂಡೆ ನೆಲದ ನೆಲೆಯ ನೋಡಿದೆ ।
ಮಹಿಯೊ? ಅಹಿಯೊ ? ಬೆಚ್ಚಿ ಬೆದರಿ ಸರಿದು ದೂರ ಓಡಿದೆ ॥

೩

ಆವ ಜೀವ ಆವ ಭಾವ ? ಆವ ತೊಲೆಯ ಕೂಡಿಕೆ ?
ಆವನಾವ ಜೀವಕೊಲಿದ ಜಲಧಿಗಾವ ಹೂಡಿಕೆ ॥

೪

ಬಿಡದು ಮಮತೆ ಬರದು ಸಮತೆ ಆರಿಗಾರ ಬಂಧನ ।
ಬಿಡಲು ದೂರ ದಣಿದೆ ಪೂರ ಎಂಥ ಚಿತ್ತ ರಂಧನ ॥

೫

ಜೀವದಷ್ಟೆ ಸಾವು ಸತ್ಯ ಸಾಕು ನಿಲಿಸು ರೋದನ ।
ನೋವ ನಿಲಿಸು ಎಂದೆನಲ್ಲ ಎನ್ನ ಹೃದ್ವಿನೋದನ ॥

೬

ಆದರೆನ್ನ ಮನೆಗೆ ನುಗ್ಗಿ ನಾನದೆಷ್ಟು ಅತ್ತೆನು ।
ವೇದ ಓದಿ ಆದೆ ವಾದಿ ಜೀವಿಸಿದ್ದು ಸತ್ತೆನು ॥

೭

ಬೋಧ ಸರಳ ಶೋಧ ತರಳ ತಿಳಿಯೊ ತಿಳಿಯ ತತ್ವವ ।
ಬಾಧೆಗಂಜಬೇಡ ಬೆಳೆಸು ಎಲ್ಲರಲಿ ಮಮತ್ವವ ॥

೮

ಓ ಸುಧಾಬ್ಧಿ! ಜೀವಿಸುವರ ಬೆಳಕ ನೋಡು ಧೀರನೇ ।
ಹಾಸು ನೆಲದ ಮೇಲೆ ನಗೆಯ ಹಾಸ ಅಸುಸಮೀರನೇ ॥

ಅಹಿ = ಹಾವು. ಜಲಧಿಗಾವ ಹೂಡಿಕೆ = ಸಾಗರಕ್ಕೆ ದಿಮ್ಮಿಗಳ ಸೇರುವಿಕೆಗೇನು ಬೆಲೆ ?
ಚಿತ್ತರಂಧನ = ಮನಶ್ಚಾಂಚಲ್ಯ, ಅಲುಗಾಟ
ಹೃದ್ವಿನೋದನ = ಹೃದಯಕ್ಕೆ ವಿನೋದ ತರುವ ಪರಮಾತ್ಮ
ಶೋಧ ತರಳ = ಆತ್ಮಶೋಧನ ಬಹು ಚಂಚಲ
ಅಸುಸಮಿರ = ಪ್ರಾಣವಾಯು



## ಸತತ ಮಾಡು ಪ್ರಣವಗಾನ

೧

ಸತತ ಮಾಡು ಪ್ರಣವಗಾನ ನುತಿಸು ಪಡೆಯೆ ಶಾಂತಿದಾನ ।
ಅತುಳ ಜಗಕೆ ಸಿಗಲಿ ಮಾನ ಶ್ರುತಿಸದುಕ್ತಿವಾದೀ ॥

೨

ಭೀತಿ ಏತಕ್ಕೆ ಹತಾಶ ಸೋತೆಯಾದರಾತ್ಮನಾಶ ।
ಪ್ರೀತಿ ತೊರೆಯೊ ಮೋಹಪಾಶ ಭೌತಯುಕ್ತಿವಾದೀ ॥

೩

ಜೊತೆಗೆ ಬರದು ನಿನ್ನ ದೇಹ, ಇತರ ಸೊತ್ತು ನಿನ್ನಗೇಹ ।
ಚತುರ! ಏತಕಿಷ್ಟು ಸ್ನೇಹ ಪತಿತಭುಕ್ತಿ ವಾದೀ ॥

೪

ತಥ್ಯ ಹೇಳಲಿಷ್ಟು ಸಿಟ್ಟೆ ? ಪಥ್ಯವನ್ನೆ ಮರೆತು ಬಿಟ್ಟೆ ।
ಮಿಥ್ಯೆ – ಎಂದು ಸಾರಿ ಬಿಟ್ಟೆ ಕಥ್ಯಶುಕ್ತಿವಾದೀ ॥

೫

ಸುತ್ತ ಕಾಣದೇ ಪ್ರಮೋದ ಚಿತ್ತಕಾಗದೇ ವಿನೋದ ।
ಮತ್ತೆ ಆತ್ಮನೆತ್ತ ಹೋದ ? ಮತ್ತಮುಕ್ತಿವಾದೀ ॥

೫

ಬೆಳಗಲೈ ಸುಧಾನುರಾಗ ಒಳಗಿನಿಂದ ಮುದದಭಾಗ ।
ಥಳಥಳಿಸುವನಾತ್ಮನಾಗ ಸ್ವಪ್ರಯುಕ್ತಿವಾದೀ ॥

ಶ್ರುತಿಸದುಕ್ತಿವಾದೀ = "ಓಂ ಕ್ರತೋಸ್ಮರ" ಎಂಬ ಶ್ರುತಿಘೋಷ ಮಾಡುವವನು.
ಪ್ರೀತಿ = ಪ್ರಿಯನೇ! ಭೌತಯುಕ್ತಿವಾದೀ = ಭೌತಿಕ ಜಗತ್ತೇ ಕುಣಿಸುವುದ - ಎನ್ನುವವನು.
ಗೇಹ = ಮನೆ, ಪತಿತಭುಕ್ತಿವಾದೀ = ನನ್ನ ಪಾಲಿಗೆ ಬಿದ್ದ ಭೋಗವಿದು - ಎಂದು ವಾದಿಸುವವನು.
ಕಥ್ಯ ಶುಕ್ತಿ ವಾದೀ = ಕಪ್ಪೆ ಚಿಪ್ಪಿನಲ್ಲಿ ಬೆಳ್ಳಿಯ ಭ್ರಮೆ ಮೂಡಿಸುವ ಜಗನ್ಮಿಥ್ಯಾವಾದವನ್ನು ಸಾಧಿಸುವ ಶುಷ್ಕವೇದಾಂತಿ.
ಮತ್ತ ಮುಕ್ತಿ ವಾದೀ = ಇಹದಲ್ಲಿ ದುಃಖ ಮಾತ್ರ; ಪರದಲ್ಲೇ ದುಃಖದಿಂದ ಮುಕ್ತಿ ಎಂಬ ಭ್ರಾಂತ ದಾರ್ಶನಿಕ.
ಸ್ವಪ್ರಯುಕ್ತಿವಾದೀ = ಆತ್ಮ - ಪರಮಾತ್ಮ ಸಂಪರ್ಕದ ಉಪದೇಶಕ.

# ಬೇರಾರ ನಾನೀಗ ಮೊರೆಹೊಗುವೆನಯ್ಯ ?

೧

ಘೋರ ಕಾಂತಾರದಲಿ ಘೋರಾಂಧಕಾರದಲಿ ।
ಕ್ರೂರ ಪಶುಗಳ ಮಧ್ಯೆ ಸಿಕ್ಕಿರುವೆನಯ್ಯ ॥

೨

ಒಂದೊಂದು ಇಂದ್ರಿಯವು ಹಿಂಸ್ರಪಶುವೇ ಆಗಿ ।
ಹಿಂದೆ ನಾ ಕಾಣದಾ ಕ್ಲೇಶವಿತ್ತಿಹುದಯ್ಯ ॥

೩

ಇಂದ್ರದೇವನೆ, ಎನ್ನ ಇಂದ್ರಿಯಂಗಳ ಮೇಲೆ ।
ತಂದ್ರಿಲತೆ ಮಸಕದೊಲು ಬಲವ ಬೆಳೆಸಯ್ಯ ॥

೪

ಜ್ಞಾನೇಂದ್ರಿಯಂಗಳಿವು ನಿನ್ನ ಸಾಕ್ಷಾತ್ಕೃತಿಗೆ ।
ಮೌನಸಾಧನವಾಗಿ ಬೆಳೆದು ಬರಲಯ್ಯ ॥

೫

ಓ ಸುಧಾನಿಧಿ! ಸುಧಾಪಾನದಾ ಸೌಭಾಗ್ಯ ।
ಲೇಸಾಗಿ ಲಭಿಪಂತೆ ಕರುಣೆ ತೋರಯ್ಯ ॥

'ಅಯ್ಯ' ಎಂಬುದು 'ಆರ್ಯ' ಎಂಬುದರ ತದ್ಭವ ರೂಪ
'ಅರ್ಯ' ಎಂದರೆ ಈಶ್ವರನ ಹೆಸರು. ಈಶ್ವರ-ವಿಶ್ವಚೇತನ.



# ಏನನರಸಿ ತಿರುಗುತಿರ್ಪೆ ನನ್ನ ಮುಗ್ಧ ಸೋದರ!

೧

ಏನನರಿಸಿ ತಿರುಗುತಿರ್ಪೆ ನನ್ನ ಮುಗ್ಧ ಸೋದರ ?
ಏನೊ ಎತ್ತೊ ಎಂಬ ತಿಳಿವೆ ? ನಿನ್ನ ತೃಷೆ ವೃಕೋದರ ॥

೨

ಇಲ್ಲದಲ್ಲಿ ಸಲ್ಲದಲ್ಲಿ ಅವನದು ನಿರೀಕ್ಷೆಯೋ ?
ಎಲ್ಲ ಬಲ್ಲ ಜಾಣನಂತೆ ನಿನ್ನದೀ ಪರೀಕ್ಷೆಯೋ ?

೩

ಘೋರವನವೇ ? ಮರಗಳೊತ್ತೆ ? ಪರ್ವತಗಳ ಶೃಂಗವೇ ?
ವಾರಿನಿಧಿಯೆ ? ದೇಗುಲಗಳೆ ? ನೀನು ಅವನ ಭೃಂಗವೇ ?

೪

ಎಲ್ಲು ಅವನು ಸಿಕ್ಕಲಿಲ್ಲವೆಂದು ಶೋಕತಪ್ತನೇ ?
ನಿಲ್ಲು ಎಣಿಸು ಚೇತನಾತ್ಮ! ಅಂಗ ನೀನು ಶಪ್ತನೆ ॥

೫

ಇಲ್ಲದಿರ್ಪ ತಾಣವೆತ್ತ ? ಕೊಂಚ ಹುಡುಕಬಲ್ಲೆಯ ?
ಅಲ್ಲೆ ? ಇಲ್ಲೆ ? ಎಲ್ಲರಲ್ಲೆ ಅವನ ಕಾಣಲೊಲ್ಲೆಯ ?

೬

ಕತ್ತಲಲ್ಲೆ ಬೆಳಕಕಾಣ! ಅಲ್ಲೆ ಅರಸೊ ಪ್ರೇಮಿಯ ।
ಸುತ್ತ ಮುತ್ತ ಬೆಳಕ ಚೆಲ್ಲಿ ಅಲ್ಲೆ ಮೆರೆವ ನೇಮಿಯ ॥

೭

ಅವನ ಒಳಗಿನಿಂದಲೆಲ್ಲ ಬಹುದು ಮತ್ತ ಅಲ್ಲಿಯೇ ।
ಸವೆದು ಪೋಪುದಲ್ಲೆ ಮರಳಿ ಮರಳಿ ಬರ್ಪುದಲ್ಲಿಯೇ ॥

"ವೇನಸ್ತತ್ಪಶ್ಯನ್ನಿಹಿತಂ ಗುಹಾಸತ್" (ಯಜುಃ೩.೨.೮) ಎಂಬ ಯಾಜುಷೀಶ್ರುತಿಯ ಭಾವಾನುವಾದ!

# ಚಿನ್ನದಂತಹ ಶುಭ್ರಹೃದಯದಿ ಸಲಿಸಲಿಚ್ಛಿಸೆ ಸದಭಿನಂದನ

೧

ಎಲ್ಲಕಡೆಯಲಿ ಇದ್ದರೂ ಸಹ ನೀನು ಕಾಣಿಸೆ ಭಕ್ತರಂಜನ ?
ಎಲ್ಲಿ ತಡಕಿದರೇನು ಚಿತ್ತವೆ ಮಲಿನವಾಗಿರೆ ತಾಪಭಂಜನ ॥

೨

ವೈರ ತುಂಬಿರಲಂತರಂಗದಿ ಎಂತು ಅಪ್ಪುದು ಪಾಪ ಮಂಜನ?
ಧೀರತನದಿಂ ಹೃನ್ಮನಂಗಳ ತೊಳೆವ ಬಲಕೊಡು ಓ ನಿರಂಜನ ॥

೩

ಎನ್ನ ಅಂತರ್ಯಾಮಿ ! ಬಯಸುವೆನಾಗೆ ಒಳಗಣ ಅರಿನಿಕಂದನ ।
ಚಿನ್ನದಂತಹ ಶುಭ್ರಹೃದಯದಿ ಸಲಿಸಲಿಚ್ಛಿಸೆ ಸದಭಿನಂದನ ॥

೪

ಆಂತರಿಕ ಶುಚಿಯಿಂದ ಉಸಿರೇ ಆಗಲೈ ಕಂಪೊಗೆವ ಚಂದನ ।
ಎಂತೊ ನೀನೇ ಭರತನಾಗಿಹೆ ನಾನೊ ? ನಿನ್ನಯ ಮುಗ್ಧನಂದನ ॥

೫

ಶತ್ರು ಶತ್ರುವೆ ಅಲ್ಲ; ಮಿತ್ರನು ಮಾತ್ರ ನಿಜಕೂ ಮಿತ್ರನೇ ಸರಿ ।
ಮಿತ್ರ! ಒಲ್ಲದೆ ದೂರವಿರ್ಪನ ದೂರದಿರು ನೀ ಸನಿಯಕೇ ಸರಿ ॥

೬

ಸ್ವಜನ-ಪರಜನ ಭೇದ ಸಲ್ಲದು ಮತ್ತಿದೇತಕರಣ್ಯರೋದನ ?
ವಿಜಯವೆಂದೂ ಅಕ್ಕರೆಗೆಯೇ ಇದಕೆ ಇರಲೈ ತ್ವದನುಮೋದನ ॥



# ಎಲ್ಲ ಬಲ್ಲ ನಿನ್ನಲೇನು ನಾನು ಬೇಡಲಿ ?

೧

ಎಲ್ಲ ಬಲ್ಲ ಒಳಗ – ಹೊರಗ ನಿನ್ನ ಬೇಡಲೇನನು ?
ಸೊಲ್ಲನೇನು ಬಿನ್ನವಿಸಲಿ ? ಹೊಸತು ಬೇಡಲೇನನು ? ॥

೨

ಏನ ನೀನು ನೀಡಲಿಲ್ಲ ? ನೀನು ಕೊಡದುದೇನಿದೆ ?
ಏನೆ ಬೇಡಲೆನ್ನಲಿಕ್ಕೆ ತ್ರಾಣವಾದರೇನಿದೆ ? ॥

೩

ಏನುಪಾಯ ನಿನ್ನ ಸೇರಲೆಂದೆ ನನಗೆ ಕಾಣದು ।
ಏನ ಗೈದು ಪಡೆವೆ ಸಿದ್ಧಿ ? ಹಿಂದೆ ಸರಿಯೆ ಮಾಣದು ॥

೪

ನಿನ್ನ ಯಜ್ಞದಲ್ಲಿ ಎಲ್ಲ ಶಕ್ತಿಯಿರ್ಪುದೆಂಬರು ।
ಮುನ್ನಡೆದಿದೆ ಎಲ್ಲ ಲಭ್ಯ ಭಕ್ತಿಯಿದ್ದರೆಂಬರು ॥

೫

ಎತ್ತಣಿಂದ ತರಲಿ ದೇವ! ಇರದ ಆತ್ಮರಾಗವ ।
ಎತ್ತಣಿಂದ ಪಡೆಯಲಿಹೆನೊ ನಿನ್ನ ಹರ್ಷಭಾಗವ ॥

೬

ಏನ ಕೊಡಲಿ ? ಏನ ಬಿಡಲಿ ? ನನ್ನದೆಂಬುದೇನಿದೆ ?
ದಾನಿ ನೀನು ನಿನ್ನ ಸನಿಯ ಇಲ್ಲವಾದುದೇನಿದೆ ? ॥

೭

ಆತ್ಮದಾನಿ! ಆತ್ಮದಾನವೆನೋ ಮಾಡಬಲ್ಲೆನು ?
ಸ್ವಾತ್ಮಭಾವ ನರ್ತಿಸುತಿದೆ ಮನವ ಕಾಡ ಬಲ್ಲೆನು ॥

೮

ಬರಿಯ ಕೈಯ ಹೊತ್ತು ಬಂದೆ ತಂದೆ-ಎಂದೆ ನಂಬುತ ।
ತೊರೆಯ ಬೇಡ ಮರೆಯಬೇಡ ನಾನು ನಿನ್ನವಂ ಸುತ ॥

## ಆ ಸುಧಾಂಬುಧಿಯಲ್ಲಿ ಮಿಂದಗೆ ಎತ್ತಣದು ಬಾಯಾರಿಕೆ ?

೧

ಎಷ್ಟು ನಿನ್ನದೊ ಅಷ್ಟೆ ನಿನ್ನದು ಬರಿದೆ ಕಳವಳವೇತಕೆ ?
ಕಷ್ಟಪಡು ದುಡಿ ನಷ್ಟಕಂಜುತ ಸರಿಯಬೇಡ ನಿಕೇತಕೆ ॥

೨

ಬಾಳಿದೊಂದು ಅನಂತ ಸಂಗದ ಧೈರ್ಯವೇ ಜಯ ಸಾಧನ ।
ಏಳು-ಬೀಳುಗಳುಂಟು ಅಭಯವೆ ಈಶದತ್ತಾರಾಧನೆ ॥

೩

ಮಣ್ಣೆ ? ಹೊನ್ನೇ ? ಹೆಣ್ಣೆ ? ಏತರ ಕಾಮವೈ ಬಿಡು ತರ್ಪಣ ।
ಸಣ್ಣತನ ಬಿಡು ಎಲ್ಲ ಕೊಡುವನು ಮಾಡು ಆತ್ಮಸಮರ್ಪಣ ॥

೪

ಸಾಧನೆಯೆ ಸಾಧಕನ ಸಂಪದ ಸಾಧ್ಯ ದೇವನ ಕೈಯಲಿ ।
ಬಾಧೆಗಂಜದೆ ನಡೆಯೊ ಚೇತನನಿರ್ಪನಕವುಂ ಮೈಯಲಿ ॥

5

ನ್ಯಾಯಕಾರಿ ದಯಾಳು ಕೈಬಿಡ ಯತ್ನ ನಿಲ್ಲದೆ ಸಾಗಲಿ ।
ಧ್ಯೇಯ ಸಾಧಿಪ ಕೆಚ್ಚನುಳಿಸಿಕೊ ಸೋಲೆ ತಾ ತಲೆ ಬಾಗಲಿ ॥

೬

ನೆರಳೆ ? ಮಕ್ಕಳೆ ? ಪಶುವೆ ? ಮಡದಿಯೆ ? ಎಲ್ಲವೂ ಬಹವೀಕಡೆ ।
ತೊರೆದು ಅಲಸ್ಯವನು ದುಡಿಯೈ ಬೆವರ ಸುರಿಸುತ ಮುನ್ನಡೆ ॥

೭

ಆ ಸುಧಾಂಬುಧಿಯಲ್ಲಿ ಮಿಂದಗೆ ಎತ್ತಣದು ಬಾಯಾರಿಕೆ ?
ಆ ಸುಧೆಯ ನಿಜವಾಗಿ ಮಿತ್ರನೆ ! ಕಡು ಅಭಾವ ನಿವಾರಿಕೆ ॥



## ಜೈಸು ಭೌತಿಕಧಾಮ ಜಪಿಸು ಓಂ ನಾಮ

೧

ಅತ್ತಲೂ ಸತ್ತವರೆ ಇತ್ತಲೂ ಸತ್ತವರೆ
ಸತ್ತರವರಿವರೆಂದು ಬರಿದೆ ಅತ್ತವರೆ ॥

೨

ಸಾವೊಂದೆ ದಿಟ ಬಾಳು ಸಟೆಯೆಂಬ ಹುಲು ಸೊಲ್ಲೆ ?
ಸತ್ತರವರಿವರೆಂದು ಬರಿದೆ ಅತ್ತವರೆ ॥

೩

ಭಯವೆ ಸಂಶಯವೆ ಸುಖ ? ಏತಕೀ ಧಾವಂತ ?
ಜಯದ ಸೆಲೆ ನಿನ್ನವನೆ ಎಂದು ಭಗವಂತ ॥

೪

ಆರಾಧಿಸಾ ಪ್ರಭುವ ನೀ ತುಂಬಿಹನ ನಭವ
ಬೇರೆ ಬಲವೇಂ ಬೇಕು ಓ ಸಾಹಸಭವ ? ॥

೫

ನಗು ನಗುತ ಮುಂದೆ ನಡೆ ಬಿಡು ಭಯವ ನೊಂದು ಕಡೆ ?
ಮಿಗೆ ಹರ್ಷ ನರ್ತಿಸುವ ಮಿತ್ರ ಸಾವನ್ನ ಬಡೆ ॥

೬

ಅದರಿಷ್ಟೇ ವಿಚಿತ್ರ ಶುಚಿಯಿರಲಿ ಚಾರಿತ್ರ
ಮೋದಿಸಲ್ಕೆ ಪವಿತ್ರ ! ಓ ಸರ್ವಮಿತ್ರ ॥

೭

ಓ ಸುಧಾರಸ ರಾಮ! ಆಗು ನೀ ನಿಷ್ಕಾಮ ।
ಜೈಸು ಭೌತಿಕ ಧಾಮ ಜಪಿಸು ಓಂ ನಾಮ ॥

## ಘಾಸಿಗಂಜದೆ ಮಾಡು ನೀ ಪುರುಷಾರ್ಥ ವತ್ಸನಿರಾಪದ!

೧

ನಿನ್ನ ನೀನೇ ಆಳಿಕೊಳ್ಳದೆ ಅನ್ಯರನು ನೀನೆಂತು ಆಳುವೆ ?
ಎನ್ನ ಚೇತನ ಚೇತರಿಸಿಕೊಳು ವ್ಯರ್ಥವಾಗದೆ ಬಾಳುವೆ ? ॥

೨

ನಿನ್ನ ಹೊರೆಯನೆ ಹೊರದೆ ಬೇರರ ಭಾರವನದೆಂತಯ್ಯ ತಾಳುವೆ ?
ಚೆನ್ನವೇನಿದು ಸೊನ್ನೆಯೆನ್ನಿಸಿ ಉಸಿರ ಸೆಳೆಯುತ ಬಾಳುವೆ ?

೩

ಜೀವನದ ನವವಿಧದಿ ಅರಳಿಸೆ ಪಥದ ವಿಘ್ನವನೆಲ್ಲ ಬಾಧಿಸು
ಆವ ಗುರಿಯೋ ಅದನು ಮುಟ್ಟಲು ಯತ್ನವನೆ ಆರಾಧಿಸು.

೪

ದುಡಿಮೆಯೆಂದೆನಿತನ್ನು ಗಳಿವೆಯೊ ಅದನೆ 'ಬಹು' ವೆಂದೆಂದು ಭಾವಿಸು
ತೊಡೆದುರಾಸೆಯ ಹಗುರವಾಗಿಯೆ ಗುರಿಯಕಡೆ ನೀ ಧಾವಿಸು.

೫

ಓ ಸುಧಾರಸಪಾನ ಕಾಮನೆ ಅದರಲೇ ಹುದುಗಿಹುದು ಸಂಪದ ।
ಘಾಸಿಗಂಜದೆ ಮಾಡು ನೀ ಪುರುಷಾರ್ಥ ವತ್ಸ ನಿರಾಪದ ॥



## ಜೈಸಲಾರದವಗೆ ಮಾತ್ರ ಅವನದೆಂದು ಸಲ್ಲನು !

ಬರಿಯದಿಲ್ಲ ಇರುವು ಇಲ್ಲ ಬಯಕು ಸಾವ್ಗಳಿಲ್ಲವೈ ।
ನೆರೆದು ನೋಡೆ ಗಗನವಿಲ್ಲ ನೆಲದನೆಲೆಯು ಇಲ್ಲವೈ ॥ ೧ ॥

ಇದ್ದುದೆಲ್ಲ ಬರಿಯ ಶೂನ್ಯ ಸತ್ಯವೊಂದು ಸೊನ್ನೆಯೇ ।
ಸುದ್ದಿ ಹರಡಿ ಎದ್ದು ಬಿದ್ದುದೇನು ನಿನ್ನ ಮೊನ್ನೆಯೇ ॥ ೨ ॥

ಕಂಡನಾರು ಸೃಜಕನನ್ನು ಸೃಜನಮಾಳ್ಪ ಕಾಲದಿ ?
ಭಂಡವಾದ ಇದ್ದರೇನು ಬುಧರನಾದಿ ಕಾಲದಿ ? ॥ ೩ ॥

ಶೂನ್ಯ ಮಾತ್ರ ಒಂದೆ ಸತ್ಯ ಉಳಿದುದೆಲ್ಲ ಕಲ್ಪನೆ ।
ಮಾನ್ಯಮಿತ್ರ ! ಹೀಗೆ ನುಡಿದ ನಿನ್ನ ಮಾತೆ ಜಲ್ಪನೆ ॥ ೪ ॥

ಏನು ಇಲ್ಲದುದನು ಕಂಡ ಶೂನ್ಯನಾರು ಬೋಧಿಸೈ ।
ನೀನೆ ಇರದೆ ಇರುದುದನ್ನು ಕಂಡೆಯೆಂತು ಶೋಧಿಸೈ ॥ ೫ ॥

ನಾಸ್ತಿಕಾಗ್ರಗಣ್ಯ! ಸೊನ್ನೆ ನಿನ್ನ ದೇವನಲ್ಲವೇ ?
ನಾಸ್ತಿ ಶೂನ್ಯವನ್ನೆ ಬೇರೆ ಏನೊ ಇರ್ಪುದಲ್ಲವೇ ॥ ೬ ॥

ಇರುವ ಏನೋ ಅದುವೆ ದೇವ ಅದಕೆ ಮಾಡು ತರ್ಪಣ ।*
ಬರಿಯವಾದ ಬದಿಗೆ ಸರಿಸು ಮೌನ ಆತ್ಮದರ್ಪಣ ॥ ೭ ॥

ಓ ಸುಧಾರಸಾಭಿಲಾಷಿ! ದೇವನೆಲ್ಲ ಬಲ್ಲನು ।
ಜೈಸಲಾರದವಗೆ ಮಾತ್ರ ಅವನದೆಂದು ಸಲ್ಲನು ॥ ೮ ॥

## ತ್ರಾಸ ತೀರಲಿ ಲೋಕ ನಲಿಯಲಿ ಬೆಳಗೆ ನಿನ್ನಾಕರ್ಷಣ

೧

ಪರರ ಗೋಜೆನಗೇಕೆ ತನ್ನಯ ಅಂತರವನೇ ಹೇಳುವೆ ।
ಪರಮ ಗುರುವರ ! ನಿನ್ನ ಕುಂದನೆ ತಿಳಿಸು ಎಂದೇ ಕೇಳುವೆ ॥

೨

ಸವೆಯ ಬೆಳಗುವ ನಾದೊಡೆನ್ನಸು ಓ ದಯಾಕರ ! ದಂಡಿಸು ।
ದಿವವ ಮುಚ್ಚಿಡ ಬಯಪೆನಾದರೆ ನಾಥ ! ನನ್ನನು ಖಂಡಿಸು ॥

೩

ಮೌಢ್ಯದಿಂ ನಾ ದಿವ್ಯ ಜನರನು ಸಲೆ ವಿತರ್ಕಿಸಿ ಬಾಧಿಸೆ ।
ಆಢ್ಯ ನನ್ನನಗತ್ಯ ಶಿಕ್ಷಿಸು ಮಿಥ್ಯೆಯನ್ನಾರಾಧಿಸೆ ॥

೪

ಅನ್ಯರಂ ಕುರಿತೇನ ಹೇಳಲಿ ? ಎಲ್ಲ ನಿನಗೆ ಅಪಾವೃತ ।
ದೈನ್ಯದಿಂ ಮೊರೆಯಿಡುವೆ ಸುಳ್ಳನು ಸತ್ಪಥಕೆ ಒಯ್ಯಾದೃಶ ॥

೫

ಆರ ಕೈಯನು ದೇವ ಬಿಡದಿರು ಸರ್ವಜನರುಪಕಾರವೇ ?
ವೈರವಳಿಯಲಿ ಮೈತ್ರಿ ಬೆಳೆಯಲಿ ನಿನಗಿದೇಂ ಬಹುಭಾರವೇ ॥

೬

ಓ ಸುಧಾಂಭೋನಿಧಿಯೆ ಸಂತತ ನೂರು ಶಾಂತಿಯ ವರ್ಷಣ ।
ತ್ರಾಸ ತೀರಲಿ ಲೋಕ ನಲಿಯಲಿ ಬೆಳಗೆ ನಿನ್ನಾಕರ್ಷಣ ॥

ಅಂತರ = ಒಳಗು. ಆಢ್ಯ = ಸರ್ವಶ್ವರಸಂಪನ್ನ
ಅಪಾವೃತ = ತೆರೆದಿಟ್ಟುದ್ದು
ಆದೃತ = ಆದರಸಲ್ಪಟ್ಟವನು



## ವಿಶ್ವಚೇತನ! ನಿನಗೆ ಕೊಡದಿಪುದೇನಿದೆಯೊ ಅಣುಚೇತನ ?

೧

ವಿಶ್ವಚೇತನ ನಿನಗೆ ಕೊಡದಿಹುದೇನಿದೆಯೊ ಅಣು ಚೇತನ ?
ನಶ್ವರಕೆ ನೀ ಬಾಗದೆಯೆ ನಡೆ – ಅವನೆ ನಿನ್ನ ನಿಕೇತನ ॥

೨

ಅವನ ಸಾಲವನೆಂತು ತೀರಿಪೆ ನಿನ್ನದೂ ಸಾಮರ್ಥ್ಯವೇ ?
ಅವನ ಚಿತ್ತದಿ ಧೇನಿಸಷ್ಟೆಯೆ – ಬಾಳಿನದು ವೈಯರ್ಥ್ಯವೇ ॥

೩

ತಂದೆ ತಾಯ್ಗಳ ಸಾಲ ಹೊತ್ತಿರೆ ನಿನಗೆ ಸಿಗುವುದು ಮೋಕ್ಷವೇ ?
ಬಂಧ ಮಾತ್ರವೆ; ಅವರ ಸೇವೆಗೆ ಸಿದ್ಧನಾಗು. ಪರೋಕ್ಷವೇ ॥

೪

ಮತ್ತಿಹುದು ಆಚಾರ್ಯ ಋಣವದು ಸ್ಮರ್ಯವೈ ಆದಭೀಕ್ಷ್ಣವು ।
ಮತ್ತನಾಗದೆ ಆತನಿತ್ತುದ ಹಂಚು ಆ ಋಣ ತೀಕ್ಷ್ಣವು ॥

೫

ಸಾಲ ತೀರಿತೆ ? ಒಳಿತೆ ಆಯಿತು. ಮುಂದಣದು ಅವಧಾರ್ಯವೈ ।
ಬಾಲ! ಉದರವು ಸಣ್ಣದಾಗಲಿ; ಬುದ್ಧಿವರ್ಧನ ಕಾರ್ಯವೈ ॥

೬

ಸೋಲದೆಯೆ ನೀ ಮಾಡಬೇಕೈ ಸರ್ವಥಾ ಸ್ವವಿಕಾಸವಂ ।
ಪಾಲಿಸೀನುಡಿ ಮೊಗದಲರಳಿಸು ವತ್ಸ! ನೀ ಮೃದು ಹಾಸವಂ ॥

೭

ಓ ಸುಧಾರಸಪಾನಕಾಮನೆ! ತೀರಿ ಭೌತಿಕ ಕಾಮನೆ ।
ಹಾಸು ಹೊಕ್ಕಿವೆ ಹೊಸೆದು ಬರಲೈ ಬಾಳ್ಗೆ ಆ ಸುಖಧಾಮನೆ ॥

"ಈರ್ಮಾಂತಾಸಃ" ಎಂಬ ಮಂತ್ರದ ಸ್ವಲ್ಪಭಾಗದ ಭಾವಾನುವಾದ. ಗ್ರಹಿಕೆ ಸ್ವಲ್ಪ ಕಠಿಣ. ಓದುಗರು ಯತ್ನಿಸಲಿ. ವಿಶ್ವಚೇತನ = ಪರಮಾತ್ಮ. ಅಣುಚೇತನ = ಜೀವಾತ್ಮ. ನಶ್ವರ = ಪರಿವರ್ತನಶೀಲ ಸಂಸಾರ. ಪರೋಕ್ಷವೇ = ಕಾಣದುದೇ. ಸ್ಮರ್ಯ = ಸ್ಮರಣೀಯ. ಅಭೀಕ್ಷ್ಣ = ಮತ್ತೆ ಮತ್ತೆ. ಅವಧಾರ್ಯ = ತಿಳಿಯ ಬೇಕಾದುದು. ಬಾಲ = ಅಜ್ಞಾನಿ. ಸುಖಧಾಮ = ಸುಖದ ನೆಲೆಯಾದ ಪರಮಾತ್ಮ.

## ಮಾಸದಿರಲಿ ಮಗನ ಮಾನ ಇನಿತು ಕರುಣೆ ತಾರೆಯ ?

೧

ಎನ್ನ ತಪ್ಪ ಮನ್ನಿಸೆಂದು ಯಾವ ಮುಖದಿ ಕೋರಲಿ ?
ನಿನ್ನ ಮೈಮೆಯರಿತ ನಾನು ಎಂತು ಮುಖವ ತೋರಲಿ ?

೨

ಶ್ರೇಷ್ಠ ಜನರನಾದರಿಸುವ ನ್ಯಾಯಕಾರಿ ನೀನಲೆ ?
ಜ್ಯೇಷ್ಠತಮನೆ ಬಿಡಿಸಲಾರೆ ಮುಗ್ಧ ನಾನು ಈ ಬಲೆ ?

೩

ನೀ ದಯಾಳು ಸತ್ಯವಾಗಿ ದಯೆಯೆ ಪೀಠ ನ್ಯಾಯಕೆ ।
ಮೇದಿನಿಯಲಿ ನಾನದೆಂತು ಸಿಗಪೆನದನಪಾಯಕೆ ॥

೪

ಪಾತಕವನು ಕ್ಷಮಿಸೆ ನೀನು ಎಂದು ನಾನು ಬಲ್ಲೆನು ।
ಏತರಳಲು ? ಸಹಿಪೆನೆಲ್ಲ ಭಯಕೆ ನಾನು ಸಲ್ಲೆನು ॥

೫

ಕ್ಷಮೆಯ ಕೋರೆನೈ ದಯಾಳು ಕೇಳ್ವೆನಿಷ್ಟೆ ಭಿಕ್ಷೆಯ ।
ಸಮಮನಸ್ಯನಾಗಿ ಸಹಿಪ ಶಕ್ತಿ ನೀಡು ಶಿಕ್ಷೆಯ ॥

೬

ನೊಂದ ಮೇಲೆ ಚಂದದಿಂದ ಶುಭ್ರನಾಗಿ ಬಾಳುವೆ ।
ಮುಂದೆ ಪಾಪವೆಸಗದಂತೆ ಎಚ್ಚರಿಕೆಯ ತಾಳುವೆ ॥

೭

ಓ ಸುಧಾಪಯೋಧಿ! ಇಷ್ಟು ಮಾತ್ರ ನೀಡಲಾರೆಯ ।
ಮಾಸದಿರಲಿ ಮಗನ ಮಾನ-ಇನಿತು ಕರುಣೆ ತಾರೆಯ ॥

"ಭಗವಂತನಲ್ಲಿ ಮೊರೆಯಿಡು; ಅವನು ನಿನ್ನನ್ನು ಕ್ಷಮಿಸುತ್ತಾನೆ. ಏಸುವಿನ ಮೂಲಕ."
"ಬಿಸ್ಮಿಲ್ಲಾ ಉರ್ರಹಿಮಾನ್ ಉರ್ರಹೀಮ್" - "ಅಲ್ಲಾಹು ಕ್ಷಮೆ ತೋರುವ ದಯಾಳು"
ನ್ಯಾಯ ಮತ್ತು ದಯೆ ಒಂದಕ್ಕೊಂದು ವಿರೋಧ" - ಎಂಬೆಲ್ಲಾ ಅವೈದಿಕ ಸಿದ್ಧಾಂತಗಳನ್ನು ವಿರೋಧಿಸಿ,
"ಸಹೋऽಸಿ ಸಹೋ ಮಯಿಧೇಹಿ" ಎಂಬ ಯಾಜುಷೀ ಶ್ರುತಿಯ ಆಧಾರದ ಮೇಲೆ ನಿಂತ ಕವಿತೆ.
ಕವಿತೆಯಲ್ಲಿ ಅರ್ಥವಾಗುದುದೇನೂ ಇಲ್ಲ.



## ಏಸು ಅಲೆದರೆ ತಾನೆ ಫಲವೇಂ ಅವನು ದರ್ಶನವೀವನೆ ?

೧

ಮುಗ್ಧ ಚೇತನ! ಎತ್ತನೋಡುವೆ ? ಇತ್ತಲಿತ್ತಲೆ ಅತ್ತಲೇ ।
ದಗ್ಧ ಮಾನಸ ಮಸುಕುತಿಳುಹಿನ ಬೆಳಕು ಸಾಲದು, ಕತ್ತಲೆ ॥

೨

ಅಲ್ಲಿ ಕಾಣನು ಇಲ್ಲಿ ಕಾಣನು ಮೇಲು-ಕೆಳಗೂ ಕಾಣನೇ ? ।
ಎಲ್ಲು ಕಾಣಿಸಲಿಲ್ಲ ಎನ್ನುತ ಹಂಬಲಿಪೆಯಾ ಜಾಣನೇ ? ॥

೩

ನೀನು ಉದ್ದದ ಭಾರಿ ಮಂತ್ರವ ಉಚ್ಚದನಿಯಲಿ ಹಾಡುವೆ ।
ಮೌನವಾಗಿಯ ಉದರ ತೃಪ್ತಿಗೆ ಏನನೋ ತಡಕಾಡುವೆ ॥

೪

ಮೊಬ್ಬು ಕವಿದಿದೆ ಸುತ್ತ ನೀನೋ ಉಬ್ಬಿಹೋಗಿಹೆ ಬೆಪ್ಪನೇ ।
ತಬ್ಬಿ ಕೊಂಡಿಹೆ ಅದನೆ ನಲಿವಿಂ ಗರ್ವದಿಂದಲೆ ತೆಪ್ಪನೆ ॥

೫

ಸಾಕು ಈ ಹುಡುಕಾಟ ಸೋದರ, ಹೃದಯಗುಹೆಯಲ್ಲಿ ನೋಡೆಯ ।
ಏಕೆ ಈ ಹುಡುಗಾಟ ? ನಿಲ್ಲಿಸು ಬಾಹ್ಯ ಜಗದಿಂದೋಡೆಯ ? ॥

೬

ರಾಜಿಸುತ್ತಿಹನೊಳಗೆ ನಿನ್ನಿಂ ಬೇರೆಯಾದರು ಸಂಗಡ ।
ರಾಜರಾಜನ ಕಾಣು ಒಳಗೆಯೆ ಸಾಕು ಬಣಗಳ ಪಂಗಡ ॥

೭

ಆ ಸುಧಾಸಾಗರದಿ ನೀನೀಸಾಡು ಮುದದಿಂ ಜೀವನೇ ।
ಏಸು ಅಲೆದರೆ ತಾನೆ ಫಲವೇಂ ಅವನು ದರ್ಶನವೀವನೇ ॥

"ನತಂವಿದಾಥ" - ಎಂಬ ಯಜುರ್ವೇದೀಯ ಮಂತ್ರದ ಭಾವಾನುವಾದ.
ಮುಗ್ಧಚೇತನ = ಮೋಹಗೊಂಡವನು, ದಗ್ಧಮಾನಸ = ತಲೆಬಿಸಿಯಾದವನು.
ಬಾಹ್ಯ ಜಗದಿಂದೋಡೆಯ = ಹೊರಪ್ರಪಂಚದಿಂದ ಸರಿದು, ಒಳಮುಖನಾಗೆಯ.
ಬಣಗಳ ಪಂಗಡ = ಮತಮತಾಂತರ ಕಿತ್ತಾಟ. ಏಸು = ಎಷ್ಟು.

# ಇನಿತು ಅಂಜಲಾರೆ ಸತ್ಯವನ್ನೆ ಹೇಳುವೆ

೧

ಆರು ಬಲ್ಲರೆನ್ನ ಕೊರಗ ಜಗದಿ ಮಾನ ಸಿಕ್ಕಿದೆ ।
ಗೌರವಕ್ಕೆ ಉಳಿವೆನೆಂದು ಶಾಂತಿಗೊಂದು ಸಿಕ್ಕಿದೆ ॥

೨

ಮಾನವೆ ಮಾತ ಮಾನಿಸಿಲ್ಲ ರಸವ ಕಾಣೆ ಬಾಳಲಿ ।
ಮನಕೆ ಕರಣ ಬಾಗುತಿಲ್ಲ ಮತ್ತನೇನನಾಳಲಿ ? ॥

೩

ಓಹೊ ಭಾರಿ ಸಂತನೆಂದು ಭಾವಿಸಿರ್ಪುದೀ ಜಗ ।
ಅಹ ! ಎಂಥ ಮೋಸವೆಂದು ಒರೆವುದೆದೆಯ ಗೀಜಗ ॥

೪

ನನ್ನ ನಾನೆ ತಣಿಸಲಾರೆ ಮತ್ತೆ ತಣಿಪೆನಾರನು ? ।
ನನ್ನ ನುತಿಗದೇನು ಬೆಲೆಯೊ ಆತ್ಮನರಿಯಲಾರನು ॥

೫

ಎಷ್ಟು ತಾಪ ಎನಿತು ಪಾಪ ಕ್ಷಮಿಸ ವಿಶ್ವಚೇತನ।
ಕಷ್ಟ ಸಹಿಪೆ ನಷ್ಟ ವಹಿಪೆ ನೊಂದನಲ್ಪಚೇತನ ॥

೬

ಆದರೇಳುವಾಸೆ ಬಿಡೆನು ಮತ್ತೆ ಮತ್ತೆ ಸಾಧಿಪೆ ।
ತೇದು ತನುವ ಸೇದಿ ಬಲವ ಅಪಜಯವನೆ ಬಾಧಿಪೆ ॥

೭

ಓ ನೀರಾಶೆ ದೂರ ನಿಲ್ಲು ನನ್ನ ಉಸಿರು ಆಸೆಯೆ ।
ನೀನು ಏನ ಮಾಡಬಲ್ಲೆ ನಿನಗೆಯೂ ಪಿಪಾಸೆಯೇ ॥

೮

ಜೊತೆಯಲಿರ್ಪನಾ ಸುಧಾಬ್ಧಿ ತೇಲಿಮುಳುಗಿ ಏಳುವೆ ।
ಇನಿತು ಅಂಜಲಾರೆ ನಾನು ಸತ್ಯವನ್ನೆ ಹೇಳುವೆ ॥



# ಮರೆಯಬೇಡ ಚಣವು ಕೂಡ ಆ ಸಹಸ್ರನೇತ್ರನ!

೧

ಆರ ಕಣ್ಗೆ ಮಣ್ಣನೆರಚ ಬಯಪೆ ನನ್ನ ಚಿತ್ತವೇ ।
"ಆರು ಇಲ್ಲ ಬೇರೆಯವರು ಎಲ್ಲ ನನ್ನ ವಿತ್ತರೇ" ॥

೨

"ಕಿಟಕಿ ಬಾಗಿಲನ್ನು ಮುಚ್ಚಿ ಮುಚ್ಚಿ ಮೇಲ್ಗವಾಕ್ಷಿಯ ।
ಸಟೆಯ ನೋಡಬಲ್ಲವನ್ನು ಕಾಣೆ ನಾನು ಸಾಕ್ಷಿಯ" ॥

೩

ಎಂದು ಬಗೆದು ಸಖನ ಕೂಡ ಹೂಡುತಿಹೆ ಕುತಂತ್ರವ ।
"ಅಂಧಕಾರ! ಆರು ನೋಳ್ಪರೆಮ್ಮ ಧೂರ್ತಯಂತ್ರವ ॥"

೪

ಎಂಬ ಭಾವವೇನು? ಏಕೆ ಮರೆತ ಆ ನಿಯಂತನ ।
ಹುಂಬ! ಎಲ್ಲಿ ಆತನಿಲ್ಲ ? ಯೋಚಿಸೈ ಚಿರಂತರ ॥

೫

ದೂರ ಗಗನಕೇರು, ಸೇರು ಸಾಗರಾಂತರಾಳವ।
ಸೇರು ಬೆಳಕಿನೊಂದು ಕಿರಣವಿರದ ತಮ ಕರಾಳವ ॥

೬

ಅಲ್ಲಿ ಕೂಡ ಅವನೆ ಇಹನು ಸಟೆಯದಿಟವ ನೋಡುವ ।
ಎಲ್ಲ ಬಲ್ಲ ವರುಣದೇವ, ಅವನದೆಲ್ಲಿಗೋಡುವ ? ॥

೭

ವಂಚಿಪಂತೆ ಜಗವ ಅವನ ವಂಚಿಪುದು ಅಸಂಭವ ।
ಸಂಚನಂಚಿಗೊವನವನು ಆಲಿಸಾತ್ಮಸಂಭವ ॥

೮

ಮರೆಯಬೇಡ ಚಣವು ಕೂಡ ಆ ಸಹಸ್ರನೇತ್ರನ ।
ನಿರುತ ಸೃಷ್ಟಿಯನ್ನೆ ನಡೆಪ ಶಕ್ತಿಮಾನ್ ಪ್ರಣೇತ್ರನ ॥

ನಿಯಂತ = ನಿಯಾಮಕ. ಹುಂಬ = ಮೂರ್ಖ. ಚಿರಂತನ = ಸರ್ವದಾ ಅಥವಾ ಅನಾದಿ-ಅನಂತ. ಆತ್ಮಸಂಭವ = ಮಗನೇ!. ಪ್ರಣೇತ್ರ = ಸರ್ವೋತ್ತಮನಾಯಕ. "ಯಸ್ತಿಷ್ಠತಿ ಚರತಿ" ಎಂಬ ಅಥರ್ವ ಮಂತ್ರದ ಭಾವನುವಾದ.

## ಇಷ್ಟು ನೆನಪಿಡು ಕಂಧ! ಭೂಮಿಯ ನೀನು ಸಡಲಿಸಬಾರದು

೧

ಗಗನವದುರಿತು ನೆಲವು ನಡುಗಿತು ಎಲ್ಲ ಹುಡಿಗೂಡಾಯಿತು ।
ಮುಗಿಲು ಕವಿಯಿತು ನೊಂದವನ ಕರೆ ಹಂಗಿಸುವ ಹಾಗಾಯಿತು ॥

೨

ಇಂದು ಕರುಣಾಮಯನೆ ಏತಕೆ ರೌದ್ರನರ್ತನಗೈದನೋ ।
ಎಂದಿನಾ ಪಾತಕಕೆ ಈ ದಿನ ದಂಡಿಸುವ ಮನಗೈದನೋ ॥

೩

ಸೊಗವನುಂಡವ ನೀನು ದುಗುಡಕೆ ಕುಸಿಯದಿರು ಓ ನಂದನ ।
ಬಿಗುವು ಸಡಿಲವು ಎಲ್ಲವೂ ಇದೆ, ಈ ಪ್ರಪಂಚದ ಸ್ಪಂದನ ॥

೪

ಅಹುದು ಸುಜನರು ದುಷ್ಟರೊಂದಿಗೆ ಹೋದರಲ್ಲವೆ ಮಣ್ಣಿಗೆ ।
ಇಹುದು ನಿಚ್ಚಿಸು; ಇಲ್ಲದುದು ಕಾಣಿಸದು ನಿನ್ನಯ ಕಣ್ಣಿಗೆ ॥

೫

ಅವರವರ ಕೃತಿ ಅವರವರ ಫಲ ಉಂಬು ಹೋದರು ಎಲ್ಲಿಗೋ।
ಇವರನೀಕ್ಷಿಸು ನೊಂದ ಮಂದಿಯ, ನೋಡದಿರು ಮತ್ತೆಲಿಗೋ ॥

೬

ನಿಂದಿಸದೆ ಪರಮಾತ್ಮನಂ ನಿಜ ಕಾರ್ಯವಂ ನೀ ಸಾಧಿಸು ।
ನೊಂದವರ ಕಣ್ಣೊರೆಸು, ಸಾಂತ್ವನ ನೀಡು-ಇಂತಾರಾಧಿಸು ॥

೭

ನಿಂದಿಸದೆ ದೈವೀ ಪ್ರಕೋಪವ, ಅಹುದು ಆದು ನಿಜ ಮುಂದಕೋ ।
ಹಿಂದಿನದ ಮರೆ ಮುಂದಿನದ ನೆನೆ ಧೀರ ನೀನಡೆ ಮುಂದಕೂ ॥

೮

ಇಷ್ಟು ನೆನಪಿಡು ಕಂದ ಭೂಮಿಯ ನೀನು ಸಡಲಿಸಬಾರದು ।
ಪುಷ್ಪವನಗಳು ಗಟ್ಟಿ ಕಲ್ಗಳು ದುರ್ಗಸಮ, ಕೆಡಬಾರದು ॥



## ನವೆದರಲ್ಲೆ ಸರ್ವಸುಖವು ತಿಳಿದು ಮುಂದೆ ಧಾವಿಸು !

೧

ಕಡಿಮೆ ದುಡಿದು ಬಹಳ ಗಳಿಪ ಬಗೆಗೆ ಚಿತ್ತವಿತ್ತೆಯ ।
ಕಡಿದೆ ಹೋಯ್ತು ಬಾಳ ಗರಿಮೆ ತನಗೆ 'ಸೊನ್ನೆ' ಯಿತ್ತೆಯ ॥

೨

ಬೆಳಗು ಬಿಳಿಯ ಕುದುರೆ ಏರಿ ಹೊರಟೆ ತನ್ನ ಗೇಹದಿಂ ।
ಬೆಳಕೆ ಹೋಯ್ತು ಸಾರ ಹೀರಿ ಎತ್ತೋ ಹೋದೆ ನೇಹದಿಂ ॥

೩

ಸ್ನೇಹದಲ್ಲಿ ಗೇಹದಲ್ಲಿ ಗೆಳೆಯನೆತ್ತ ಹೋದನೋ ।
ಆಹ ಎನುತ ಮನೆಗೆ ಹೋದ-ಆರದೆಂದು ಹೋದನೋ ?

೪

ಅಪ್ಪ ಅಮ್ಮ ಬಂಧು ಬಳಗ ಎಲ್ಲ ಹೆರವರಾವರು ।
ಬೆಪ್ಪ! ತನ್ನ ಸೋತ ಮೇಲೆ ನನ್ನ ಮಂದಿ ಯಾತನು ? ॥

೫

ಬೆಳಗೆ ಇದ್ದ ಸೌಧವೆತ್ತ ಎತ್ತಣೀ ಕುಬೀರವು ?
ಕೆಳಗೆ ಬಿದ್ದಮೇಲೆ ಎತ್ತ ಕುದಿವ ಕಡಲ ತೀರವು ?

೬

ದಾಳಕೇಕೆ ಮಾರುಹೋದೆ ! ದುಡಿಮೆಗೇತಕಂಜಿದೆ ?
ಬೀಳೆ ಜೂಜಿನಂತ, ಬಂಧು 'ಸುಲಭ'ದಲ್ಲಿ ನಂಜಿದೆ ॥

೭

ಬೆವರ ಸುರಿಸಿ ಸಿಕ್ಕಿದಷ್ಟ 'ಬಹಳ' ವೆಂದು ಭಾವಿಸು ।
ನವೆದರಲ್ಲಿ ಸರ್ವಸುಖವು ತಿಳಿದು ಮುಂದೆ ಧಾವಿಸು ॥

ಸುಲಭದಲ್ಲಿ ನಂಜಿದೆ = ವಿಷವಿದೆ.

# ನಮನ ನಮನ ನಮನ ನಿನಗೆ ಸಾವೆ! ಸನಿಯ ನುಗ್ಗಿಬಾ!

೧

ನಮನ ನಮನ ನಮನ ನಿನಗೆ ಸಾವೆ! ಸನಿಯ ಸರಿದು ಬಾ ।
ನಮಿಪೆ, ಆದರಂಜೆ ನಿನಗೆ ಕಟ್ಟ ಕಳಚಿ ಹರಿದು ಬಾ ॥

೨

ಹಾರ ಬಯಪೆ ಮುಳುಗ ಬಯಪೆ ಈಜ ಬಯಪೆ ಸರ್ವದಾ ।
ಘೋರ ಬಂಧ ಅದಕೆ ಬಿಡದು ಸಡಲಿಸದನು, ಬಾ ಸದಾ ॥

೩

ಒಂದು ಬದುಕ ಚಲನೆ ನೀನು ತಡೆಯಬಲ್ಲೆ ಸತ್ಯವೇ ।
ಒಂದೆ ಬಾಳ ಮುಂದೆ ಬದುಕೆ ಇರದೆ ? ಇದೆ ಅಗತ್ಯವೇ ? ॥

೪

ನಿನ್ನದೇನು ಹಿರಿಮೆ ಸಾವೆ ಇರುವನಲೆ ನಿಯಾಮಕ ।
ನಿನ್ನೆ ಸತ್ತೆ ಬಂದೆ ಮತ್ತೆ ಒಂದೆ ಸುತ್ತೆ ? ಭ್ರಾಮಕ ॥

೫

ದೇವ ಮತ್ತೆ ಮತ್ತೆ ನಿನ್ನ ನನ್ನ ಬೆರೆಪ ಹೋಗಿ ಬಾ ।
ಸಾವೆ! ಬರುವೆ ಮತ್ತೆ ಕಾಂಬೆ ಎತ್ತೊ ಹೋಗಿ, ಜೋಗಿ ಬಾ ॥

೬

ಯಮನೆ! ನಿನಗೆ ನೂರು ನಮನ ನಿನ್ನ ದೂತ ಸಾವಿಗೂ ।
ನಮನ ನೂರೆ ? ಸಾವಿಗೂರೆ ? ನಮನ ಬರುವ ಕಾವಿಗೂ ॥

೭

ಓ ಸುಧಾಬ್ಧಿ ! ಸಾವ ಬಾಳ ಗಾಲಿ ತಿರುಗಿ ತೀರಲಿ ।
ಫಾಸಿ ಏನು ? ಪಾಶವೇನು ? ಎದೆಯ ಕುದಿಯ ಹೀರಲಿ ॥

ಇದೆ ಅಗತ್ಯವೇ = ಇದೇ ಕೊನೆಯ ಬದುಕೆಂಬದು ಅಗತ್ಯವೇ ?
ನಿಯಾಮಕ = ಯಮ, ಭಗವಂತ. ಭ್ರಾಮಕ = ಒಂದೇ ಜನ್ಮ - ಎನ್ನುವು ಭ್ರಮೆ ಹುಟ್ಟಿಸುವಂತಹುದು.
ಬೆರೆಪ = ಸೇರಿಸುವವನು. ಕಾಂಬೆ = ಕಾಣವೆನು. ಜೋಗಿ = ತಿರುಕನಂತೆ ಅಲೆದಾಡುವ ಸಾವು.
ಸಾವಿಗೂರೆ = ಸಾವಿಗೆ ಒಂದೆ ನೆಲೆಯೆ ? "ನಮೋಽಸ್ತು ತೇ ನಿರ್ಋತೇ" ಎಂಬ ಅಥರ್ವ ಮಂತ್ರದ ಆಧಾರ.



# ವಿಧಿಗೆ ಬಾಗಿದೆ ಸದನುರಾಗದೆ ಮುಂದೆ ನಡೆವುದಗತ್ಯವೈ

೧

ಎನ್ನ ಚಂಚಲ ಮನವೆ ಯಾವೆಡೆ ಓಡುತಿಹೆ ? ಮತ್ತೇತಕೆ ।
ಮುನ್ನ ನಿಶ್ಚಯ ಮಾಡದೆಲ್ಲಿದೆ – ಹೋಗಬೇಕೆ ನಿಕೇತಕೆ ? ॥

೨

ನಿಲ್ಲು, ನೆನೆ ಏನೆಸಗಬೇಕಿದೆ ? ಎಷ್ಟು ನಿನ್ನಯ ದಕ್ಷತೆ ? ॥
ಗೆಲ್ಲೆ ಗುರಿಯನು ಅದನು ಕಂಡುಕೊ ಏತಕೀಯುವೆ ಅಕ್ಷತೆ ॥

೩

ಶುದ್ಧ ಭಾವನೆ ಶುದ್ಧ ಕೃತಿಯನೆ ಮರೆತರಿನ್ನೇನ್ವೈ ಫಲ ? ।
ಬದ್ಧನಾಗದೆ ಬೇರೆ ಏನದು ಸಿದ್ಧಿದಪ್ಪುದು ? ಬರಿದೇ ಛಲ ॥

೪

ಸದ್ದು ಮಾಡದೆ ಬಲವ ಗಳಿಸೈ ನಿರ್ಬಲಗೆ ಜಗ ವೈರಿಸೈ ।
ಗುದ್ದಿ ಗಾಳಿಯನೇನ ಸಾಧಿಪೆ ? ವಿಘ್ನಬಾಧೆಯ ಸೈರಿಸೈ ॥

೫

ಬೊಳ್ಳು ಚಿತ್ತವು ಬೊಳ್ಳು ವಚನವು ಬೊಳ್ಳು ನಿನ್ನ ಶರೀರವು ।
ಮಳ್ಳ ! ಜಳ್ಳಹ ಈ ಕರಣಗಳು ನಿನ್ನ ಕೆಡಹದೆ ತೀರವು ॥

೬

ಚಿತ್ತ-ಸಂಯಮ ಮೊದಲದೈ ಯಮ – ಅತ್ತ ತಿರುಗಿಸು ದೃಷ್ಟಿಯ ।
ಮತ್ತೆರಡು ಸಹ ನಿನ್ನ ಕೈವಶ, ಚಿಗುರಿಸಾತ್ಮನ ಸೃಷ್ಟಿಯ ॥

ಅದುದಾಯಿತು ನೀ ಹುಸಿಯದಿರು, ಕರೆಯೊ ಕರುಣಾಪೂರನ !
ಹೋದುದೆಲ್ಲವ ಮತ್ತೆ ಗಳಿಸುವೆ, ನಂಬು ಶೋಕವಿದೂರನ ॥

ಸುಧೆಯ ವರ್ಷಣ ಅಘವಿಮರ್ಷಣದಿಂದ ಲಭಿಪುದು ಸತ್ಯವೈ ।
ವಿಧಿಗೆ ಬಾಗದೆ, ಸದುನುರಾಗದೆ ಮುಂದೆ ನಡೆವುದಗತ್ಯವೈ ॥

# ಸೊಗಕೆ ನೀನೆ ದಾರಿ ತೋರು ನೀನೆ ಸತ್ತ್ರವರ್ತಕ

೧

ಸಾಕೆ ನೂರು ? ಸಾಕೆ ಲಕ್ಷ ? ಕೋಟಿಗಾಗಿ ಮುಂದರಿ ।
ಸಾಕು ಯೋಗ ಸಾಕು ರೋಗ ಸಾಕು ದೈನ್ಯ ಕುಂದರಿ ? ॥

೨

ರಾಜ್ಯ ಬೇಕೆ ? ಕೋಶ ಬೇಕೆ ? ಶಾಸನಾಧಿಕಾರವೇ ॥
ವ್ಯಾಜ್ಯವೇಕೆ ? ತ್ಯಾಜ್ಯವೇಕೆ ನೀನು ಒಬ್ಬ ಭಾರವೇ ॥

೩

ಎಂಬು ಹತ್ತಿ ಮಾಡಿ ಕಟ್ಟಿ ಬಾಳಿ ನಡೆಸು ಭರ್ಜರಿ ।
ಎಂಬು ಮಾತ ಗುಡಿಸಿಲಿಂದ ನೀನು ದೂರವೇ ಸರಿ ॥

೪

ಹೀಗೆ ಮಾಯೆ ಕುಣಿಸುತಿಹುದು ನಾನದೆತ್ತ ನೋಡಲಿ ?
ಹೇಗೊ ನುಣಿಚಿಕೊಳಲು ಬಯಸೆ ಯಾರ ಕಡೆಗೆ ನೋಡಲಿ ?

೫

ಎಂಥ ಮುಗ್ಧನಾದಿ ಅಲೆದೆ ಮರೆತು ನಿನ್ನನೇ ಅಹ !
ಪಂಥ ಮರೆತು ನಿನ್ನ ಸನಿಯ ಸಿಗುವುದೆಲ್ಲವೂ ಸಹ ॥

೬

ಮಾಯೆ! ತೊಲಗು ದೂರ ಸಾಗು ಸಾಕು ನಿನ್ನ ಆಟವು !
ಸಾಯ ಬಲ್ಲೆ ನೋಯ ಬಲ್ಲೆ ಬೇಡ ನಿನ್ನ ಕಾಟವು ॥

7

ನಗೆಯೊ ದಗೆಯೊ ಅಳಿವೊ ಉಳಿವೊ ನೀನೆ ನನ್ನ ನರ್ತಕ !
ಸೊಗಕೆ ನೀನೆ ದಾರಿ ತೋರು ನೀನೆ ಸತ್ತ್ರವರ್ತಕ ॥



# ಸುಧೆಯ ಸುರಿಸುವ ಸುಧೆ ನಗಲಿ

೧

ಆರು ನಿನ್ನ ಶತ್ರುವೆಂದು ಬೆಟ್ಟುಮಾಡಿ ತೋರಲಿ ?
ಆರ ಕುಲವ ಒರಸಿಸಾಕು ಎಂದು ನಿನ್ನ ಕೋರಲಿ ॥

೨

ಎಲ್ಲ ನಿನ್ನ ಸುತ-ಸುತೆಯರೆ ಪರರದಾರೋ ಕಾಣೆನೇ ॥
ಕೊಲ್ಲು ತನ್ನವರನೆ-ಎಂದ ನಾನು ಕೋರ ಮಾಣೆನೇ ॥

೩

ಮೋಸ ಹೋದೆನಯ್ಯ ಖಳರನಂಬಿ ಮೋಹದಿಂದಲೇ ।
ಘಾಸಿಯಾದೆ ಬೊಳ್ಳು ಶಾಸ್ತ್ರನಂಬಿ ಅಂದಿನಿಂದಲೇ ॥

೪

ಎಲ್ಲ ನನ್ನ ಜನರೆ ಅಹುದು ಆದದವರ ವೃತ್ತಿಯೋ ?
ಸೊಲ್ಲನೊಲ್ಲದಯ್ತು ಅದುವೆ ತಂಡಹಳಸು ಬುತ್ತಿಯೋ ?

೫

ನನ್ನ ಮತವದೊಂದೆ ಸತ್ಯ ಇದನೆ ನೀನು ತಬ್ಬಿಕೋ !
ಬೆನ್ನ ತೋರೆ ಜ್ವಲಿಸುತಿಹುದು ನಕರದನಿಲ ತಬ್ಬಿಕೋ ॥

೬

ದೇವ ನಿನ್ನ ವೇದಕಾವ್ಯಕಾವುದಾಗಬಹುದು ಸಾಟಿ ।
ಓದಿ ಮುಗ್ಧಹಿತವ ಕೋರುವುದೆಯೆ ನಮ್ಮ ಭವ್ಯಪಾಟಿ ॥

೭

ಸುಧೆಯ ಸುರಿಸಿ ಮುದವಸರಿಸಿ ಮುಗ್ಧರನ್ನು ಪಾಲಿಸು ।
ಸುಧೆಯೆ ಹರಿದು ವಸುಧೆ ನಗಲಿ ನನ್ನ ಕರೆಯನಾಲಿಸು ॥

# ಈಸಿ ಜಗತೀಜಲಧಿಯನು ಹೊರಬರ್ಪ ಚಿತ್ತಸ್ಥೈರ್ಯದ

೧

ಗಡ ಗಡನೆ ನಡುಗುತಿಹೆ ಏತಕೆ ಅಮರ ಪಥ ಸಂಚಾರಿಯೇ ।
ನಡೆಯ ತಡೆಯುವ ಮೃತಿಯ ನೀಕ್ಷಿಸಿ ಕಂಪಿಪೆಯ ತನುಧಾರಿಯೇ ॥

೨

ಕಂಪಿಸುತ್ತಲೋ ನೋಂಫಿಸುತ್ತಲೊ ಕಾಯ ಬಿಡಲೇ ಬೇಕಲೇ ।
ತಂಪೋ ಸಂಪೋ ಅಳುವೊ ನಗುವೋ ತಪ್ಪದದು ಭಯವೇಕಲೇ ॥

೩

ಜನನದಷ್ಟೇ ಮರಣ ಸತ್ಯವು ಸಾವು ತಪ್ಪದು ಮಾನವ ।
ನೆನೆಯೆ ಸಾವದು ಕೆಟ್ಟದಲ್ಲವು ಭಯವೆ ಅರಿ ಬಿಡುತಾನವ ॥

೪

ಸಾವೆ! ಇದೆ ಮೊದಲಲ್ಲ ಮುನ್ನವು ಎಷ್ಟೋ ಸಲ ನೀ ಬಂದಿಹೆ ।
ದೇವ ದೇವನ ನಿಯಮ ತಪ್ಪದು ನಾನು ಮನ್ನಣೆ ನಂದಿಹೆ ॥

೫

ನಮನ ಶತ ನಿನಗಿರಲಿ ಸಾವೇ ! ಭಯವ ನಾನೇ ಭಂಜಿಪೆ ।
ಭ್ರಮವ ನೂಂಕುತ 'ಮೃತ್ಯುವಿಜಯೀ' ಎಂಬ ನಾಮದಿ ರಂಜಿಪೆ ॥

೬

ಮಾಡಿ ನೆರೆಸತ್ಕರ್ಮ ಬಾಳೊಳು ಗಳಿಸೆ ಪಕ್ವತೆಯಪ್ಪುದು ।
ನೋಡು ಗಳಿತಿಹ ಹಣ್ಣಿನಂದದಿ ತನುವಿಸರ್ಜನವಪ್ಪುದು ॥

೭

ಸಾವು ಬರೆ ನಗುನಗುತಲೇ ಅದಕೀಯೊ ನೀ ಸುಸ್ವಾಗತ ।
ಓವಿ ಬಾ ಬಾ ಎಂದದನು ಕರೆ ಏತಕಂಜು ಅನಾಗತ ॥

೮

ಓ ಸುಧಾಸಾಗರನೆ ! ಕರುಣಿಸು ನನಗೆ ನಿಶ್ಚಲ ಧೈರ್ಯವ ।
ಈಸಿ ಜಗತೀ ಜಲಧಿಯನು ಹೊರಬರ್ಪ ಚಿತ್ತಸ್ಥೈರ್ಯವ ॥

"ನಮೋಽಸ್ತುತೇ ನಿರ್‌ಋತೇ" - ಎಂಬ ಯಜುರ್ವೇದ ಮಂತ್ರದ ಆಧಾರ.



# ಏಸು ಯತ್ನ ಬೇಕೊ ಮಾಡಿ ಹಾಡಿ ಬಿಡುವೆ ವಿಜಯರಾಗ

೧

ನೀನೆ ತಂದೆ ನೀನೆ ತಾಯಿ ನೀನೆ ಬಂಧು ಬಳಗ ನೀನೆ ।
ನೀನೆ ಸದನ ನೀನೆ ಶರಣ ಸಂಪದಂಗಳೆಲ್ಲ ನೀನೆ ॥

೨

ಎಂದು ನಿನ್ನ ಬಳಿಗೆ ಬಂದೆ ಲೋಕವೆಲ್ಲವನ್ನು ಕಂಡೆ ।
ಒಂದೆ ಮಾತು ಎಲ್ಲರಿಂದ ಹೃದಯವಲ್ಲ ಕಲ್ಲುಬಂಡೆ ॥

೩

ಮರುಕ ಉಂಟು ಮನವು ಉಂಟು ಆದರಿದುವು ಎಂಥ ಗೋಳು ।
ಇರುಳು ಹಗಲು ಹಸಿವು ದಾಹ ಇವೆಯೆ ಕಚ್ಚುತಿಹವು ತೋಳು ॥

೪

ಎಂದು ನಿನಗೆ ನೆರವು ಬಹೆವೊ ? ಸಾಧ್ಯವಿಲ್ಲ-ಮಾತಿದೊಂದೆ ।
ಅಂತರಾತ್ಮ ! ನೀನು ನಂಬಿದವರ ಕೈಯ ಬಿಡದ ತಂದೆ ॥

೫

ಬೇಡಲೇನ ಪೊಸತ ನಾಥ! ಅಂತರಿಕದ ಬಲವನೂಡು ।
ಹೇಡಿ ನಾನು ಎಂಬ ಭಾವವನ್ನು ಬಹಳ ದೂರ ದೂಡು ॥

೬

ಓ ಸುಧಾಬ್ಧಿ ನಿನ್ನ ಸನಿಯ ಘೋರ ವಿಷಕದೆಲ್ಲಿ ಜಾಗ ।
ಏಸು ಯತ್ನಬೇಕೊ ಮಾಡಿ ಹಾಡಿ ಬಿಡುವೆ ವಿಜಯ ರಾಗ ॥

## ಈಸು ಭೀತಿ ಬೇಡ ಎಲ್ಲ ನಿನ್ನ ಸಲುವೆ ಸಂಪದ!

೧

ನಾ ದರಿದ್ರ ನಾ ದರಿದ್ರ ಎಂದದೇಕೆ ರೋದಿಪೆ ?
ವೇದ ಓದಿ ಕಲಿತುದೇನು ಶಬ್ದ ಮಾತ್ರಮೋದಿಪೆ ।

೨

ಸರ್ವಸಂಪದಂಗಳೊಡೆಯ ಸಿರಿಯ ಸಿರಿಯು ಎಲ್ಲೆಡೆ ।
ಸರ್ವಜೀವರಾಶಿ ಕೇಳ್ವುದೆಲ್ಲ ಇದೆಯೊ ಮುಗ್ಧ ಎಲ್ಲೆಡೆ ॥

೩

ದೇವಪುತ್ರನಾಗಿ ನೀ ದರಿದ್ರನೆಂತು ಆಗುವೆ ?
ನೋವ ನಲಿವ ಮರೆತು ದುಡಿಯೊ ಸಿರಿಯ ಹೆಕ್ಕೆ ಬಾಗುವೆ ।

೪

ಬೇರೆಯವರ ಕಂಡದೆಷ್ಟೊ ? ವತ್ಸ ನಿನ್ನ ಪಾತಕೆ ।
ಬೀರು ನೋಟ ಒಳಗೆ ನೀನೆ ಕೊಡಲಿ ನಿನ್ನ ಘಾತಕೆ ॥

೫

ಕರ್ಮರಹಿತ ಧರ್ಮವೇತ್ತ ? ವತ್ಸ ಶಬ್ದ ಘೋಷಣ ।
ಧರ್ಮಕರ್ಮ ದುಡಿಮೆ ಮಾತ್ರ ಅಲ್ಲೆ ನಿನ್ನ ಪೋಷಣ ॥

೬

ಬಿದ್ದುದಾಯ್ತು ಎದ್ದು ನಿಲ್ಲು ಸೊಂಟ ಕಟ್ಟು ಗೈಮೆಗೆ ।
ಗೆದ್ದು ಮೌಢ್ಯ ದುಡಿದು ಸಾಗು, ಅದುವೆ ಹಾದಿ ಮೈಮೆಗೆ ॥

೭

ಆ ಸುಧಾಬ್ಧಿ ಎಂದು ನಿನ್ನ ಜೊತೆಗೆ ನೀ ನಿರಾಪದ ।
ಈಸು ಭೀತಿ ಬೇಡ ಎಲ್ಲ ನಿನ್ನ ಸಲುವೆ ಸಂಪದ ॥



## ಆತ್ಮ ಶುದ್ಧಿಗೆ ನಿತ್ಯ ಯತ್ನಿಸು ಆಗು ಸುಪವಿತ್ರ

೧

ಕಾಯ ಆತ್ಮನಿಗಾಗಿ ಆತ್ಮನು ಕಾಯಕಾಗಲ್ಲ
ಕಾಯ ರಕ್ಷಿಸು ಆದರದುವೇ ಎಲ್ಲವೂ ಅಲ್ಲ.

೨

ದೇಹ ದೇಗುಲ ಆತ್ಮನೊಡೆಯನು ಅದಕೆ ಗೋಪುರವೈ
ದೇಹ ರಕ್ಷಣೆಗಾತ್ಮನಂ ಮರೆತಲ್ಲಿ ಏನ್ ಪುರವೈ.

೩

ಅಂಗ-ರಕ್ಷಣೆ ತಿಂಡಿ – ತೀರ್ಥಗಳಿಂದ ತಾನಿಲ್ಲ
ಹಿಂಗದಿಂದ್ರಿಯ ಜಯದಲಡಗಿದೆ ಬೇರೆ ಮಾತಿಲ್ಲ.

೪

ಆಗು ಇಂದ್ರಿಯವಂತ ಅವುಗಳಿಗಲ್ಲ ನೀದಾಸ
ಸೋಗ ವರ್ಜಿಸು ಮಾಡದಿರು ನೀನಾತ್ಮನುಪಹಾಸ

೫

ಇದುವೆ ಆತ್ಮನ ವಿಜಯದಾ ಪಥ ಆಗು ದೇಹೇಶ
ಇದುವೆ ಶ್ರುತಿಪಥ ಇದುವೆ ಶ್ರುತಿಗಳ ನಿತ್ಯ ಸಂದೇಶ.

೬

ಆತ್ಮವಿಜಯಿಯೆ ಮೋಕ್ಷಗಾಮಿಯು ತಿಳಿಯಿದಂ ಮಿತ್ರ
ಆತ್ಮ ಶುದ್ಧಿಗೆ ನಿತ್ಯ ಯತ್ನಿಸು ಆಗು ಸುಪವಿತ್ರ

## ಮಧುರ ಸುಧೆಯ ತೊರೆದು ನುಗ್ಗುತಿರ್ಪೆ ಕಾವೆಡೆ!

೧

ಕುಣಿಪನಾರು ಕುಣಿವನಾರು ಕುಣಿದು ದಣಿದು ಹೋದೆಯ ?
ಕುಣಿವುದಂತು ತಪ್ಪದಯ್ಯ ಆಗಲೈ ನವೋದಯ ॥

೨

ಪ್ರಕೃತಿ ಕುಣಿಪ ರೀತಿ ಬೇರೆ ಅದರದೆಲ್ಲ ಮಾಯೆಯೇ ।
ವಿಕೃತ ಚಿತ್ತ ತೋರಿಸುವುದು ಹಲವು ಬಗೆಯ ಛಾಯೆಯ ॥

೩

ಭಾರ್ಯೆ ಬೇಕು ಸುತರು ಬೇಕು ಬೇಕು ಮನೆಯ ವೈಭವ ।
ಕಾರ್ಯ ಗೈವರೆಲ್ಲ ಬೇಕು ಒಡೆಯನೊಬ್ಬ ನಾನವ ॥

೪

ಮೋಹಮಾಯೆ ಸುತ್ತಿಕೊಳ್ಳಲೆಲ್ಲವೂ ವಿರೂಪವೇ ।
ಕಾಪುದಾರು ಕೊಲುವರಾರು ಎಲ್ಲ ತಮದ ರೂಪವೇ ॥

೫

ಪ್ರಿಯೆಯ ಮೋಹ ಸುತರ ಮೋಹ ಧನದ ಮೋಹ ಸಾಲದೆ ।
ನಿಯಮವಿಲ್ಲ ಬಾಳಿಗೊಂದು ಉಸಿರಲಾರ ಕಾಲದೆ ॥

೬

ತಿರುಗಿ ನೋಡು ಮುಗ್ಧ ಬಂಧು ಕುಣಿಸುತಿರುವನಾವನು ।
ಗುರುವೆ ಇಲ್ಲ ಜಿಗಿದು ಸೋತೆ ಸಂತವಿಸುವನಾವನು ॥

೭

ನೃತ್ತಕಾರನೊಬ್ಬನನ್ನು ಮರೆತು ತೊರೆದೆ ಪಾಯಸ ।
ಸತ್ಯ ಆ ನಟೇಶ ಕುಣಿಸಿದಲ್ಲಿ ಎತ್ತಣಾಯಸ ॥

೮

ದೇವ ಕುಣಿಸೆ ದಣಿವೆ ಇಲ್ಲ ಬರ್ಪುದಾತ್ಮ ವಿಸ್ಮೃತಿ ।
ಜೀವನದಲೆ ಮುಕ್ತಿ ಭೋಗ ದೂರದೂರವೇ ಮೃತಿ ॥

೯

ಮಧುರ ಸುಧೆಯ ತೊರೆದು ಎತ್ತ ? ಹೋಗುತಿರ್ಪುದಾವೆಡೆ ?
ದಧಿಯ ತಣ್ಪು ಮರೆತುದೇಕೆ ನುಗ್ಗುತಿರ್ಪೆ ಕಾವೆಡೆ ॥



## ದೀನ ನಾನೇ ? ನಿನ್ನ ಪುತ್ರನು ? ನುಡಿವೆ ವೇದದ ಮಾತನೇ

ನಿನಗೆ ಬಾಗುವೆ ದೇವ ದೇವನೆ ಸರ್ವಪಾತಕ ಭಂಜನ ।
ಮನದ ಬೀಗನು ದೂಡುತಿರ್ಪೆನು ಆತ್ಮವೇದ ನಿರಂಜನ ॥

ಕಂಡುಕೊಂಡೆನು ಓಮದಂಗನೆ ಗೈವೆ ದಂಭವಿಸರ್ಜನ ।
ಭಂಡತನ ತೊರೆದಿರ್ಪೆ ಕೇಳದೆ ಪ್ರಕೃತಿಯೂ ಘನಗರ್ಜನ ॥

ನೀನು ಕುಣಿಸಿದ ಹಾಗೆ ಕುಣಿವೆನು ಮಣಿಯೆನೆಂದಿಗೂ ಮಣ್ಣಿಗೆ ।
ನಾನು ನಿನ್ನವ ನೀನು ನನ್ನವ – ಸನಿಯು ಸುಳಿಯಿತು ಕಣ್ಣಿಗೆ ॥

ನೀನುಪಾಸ್ಯನು ನೀನೆ ಕೊಡುತಿಹೆ ಎಲ್ಲ ರೀತಿಯ ಸಂಪದ ।
ನೀನೆ ತನುಬಲ ನೀ ಮನೋಬಲ ವೀವೆ ನಾಥ ನಿರಾಪದ ॥

ನೀನು ಆತನೆ ಸರ್ವದಾತನೆ ನೀಗಿಸೆಲ್ಲರ ಯಾತನೆ ।
ದೀನ ನಾನೇ ? ನಿನ್ನ ಪುತ್ರನು ನುಡಿದೆ ವೇದದ ಮಾತನೇ ॥

# ಆತಂಕಿಗಳಿಗೇಕೆ ಅಧ್ಯಾತ್ಮವರಯೋಗ ?

॥ ೧ ॥

ಎಲ್ಲೆಲ್ಲಿ ಹುಡುಕಿದೆನೋ ನಿನ್ನ ನಾ ಹೃದ್ವಾಸ !
ಎಲ್ಲಿಯೂ ಸಿಗಲಿಲ್ಲ ಬರಿದೆ ಆಯಾಸ !

॥ ೨ ॥

ಪರ್ವತಗಳೇರಿದೆನು ಶಿಖರಗಳ ಚುಂಬಿಸಿದೆ,
ಸರ್ವೇಶ! ನೀನೇಕೆ ಬರಿದೆ ಹುರಿದುಂಬಿಸಿದೆ !

॥ ೩ ॥

ಗಿರಿಗಳಿಂದುರುಳುರುಳಿ ಹರಿವ ನದಿಗಳ ಕಂಡೆ,
ಕುರುಚಲುಗಳಿಂ ಕಂಡೆ ಗಹನ ಗವಿ ಬಂಡೆ.

॥ ೪ ॥

ಆರಾದರೂ ಯೋಗಿಗಳ ಕಾಣೆ ಬಹಳಲೆದೆ,
ಯಾರು ಬಲ್ಲವರೆನುತ ಕಂಪಿಸಿತೆದೆ.

॥ ೫ ॥

ಎಂದೆಂದು ಸಿಕ್ಕಿದರೂ ಅಂದೇನು ಸಿಗಲಿಲ್ಲ,
ಮುಂದಣವ ಬಲ್ಲರಾರ್ ಉತ್ಸಾಹ ಮಿಗಲಿಲ್ಲ.

॥ ೬ ॥

ಆತಂಕಿಗಳಿಗೇಕೆ ಅಧ್ಯಾತ್ಮವರಯೋಗ ?
ಈ ತಂಕ ಕೊಟ್ಟುವೇ ಕಾಡಿನಲ್ಲಿ ಭೋಗ.

॥ ೭ ॥

ಬೇಡ ಹರಿ ಇಂದಲ್ಲ ಮುಂದೆಂದೋ ನಾ ಬರ್ಪೆ,
ಕಾಡು ಬೀಡಾಗುವುದು ನಿನ್ನನೂ ಕರೆತರ್ಪೆ.

॥ ೮ ॥

ನಾನಿರ್ಪೆ ನೀನಿರ್ಪೆ ವನವಿಹುದು ಇಹುದು ತೊರೆ,
ಜ್ಞಾನಿ ಯಾವನೊ ಎಂದೊ ಕೇಳುವನು ನದಿಯ ಮೊರೆ.

॥ ೯ ॥

ನದಿಯ ಮೊರೆ ನಮ್ಮಿಬ್ಬರೊಂದಿಗೆಲ್ಲವ ತಹುದು
ಮುದ ಮಿಗಲು ಜಗಕೆ ನಮಿಸುತ್ತ ಬಹುದು



# ನಿನ್ನಿಂದಾಗುವ ಪರಹಿತ ಸಾಧನ

೧.

ಬೇಡುವ ದೈನ್ಯವ ಮೂಲೆಗೆ ತಳ್ಳುತ
ಮಾಡಿಕೊ ಆತ್ಮ ವಿಕಾಸವನು.
ನೋಡುತಲಿರ್ಪೆಯ ತಿರಿದುಂಬಾತರ
ಖೋಡಿಯ ಆತ್ಮಹ್ರಾಸವನು.

೨.

ಕೈಗಳು ಕಾಲ್ಗಳು ಕಣ್ಗಳು ಕಿವಿಗಳು
ಬೀಗದ ಬೌದ್ಧಿಕ ಸೌಂದರ್ಯ
ಈಡಿದಕೇನಿದೆ ಬಾಡುತ ಕುಳಿದಿರು
ಮಾಡ್ವೈ ಯತ್ನವ ನರವರ್ಯ

೩.

ತನ್ನಯ ಕುಂದಿಗೆ ಅನ್ಯರ ನಿಂದಿಸಿ
ನಿನ್ನಿಂದಪ್ಪುದೆ ಸಾಧನೆಯೆ ?
ನಿನ್ನಯ ನಾಥನು ನೀನೇ ಎಂದರಿ
ಮುನ್ನಡೆ ! ಸಿರಿಗಿರಿಯೇ ಮನೆಯು.

೪.

ಆದರಹಂಕೃತಿಗೆಡೆಗೊಡಬಾರದು
ಹೋದ ದಿನಂಗಳ ನೀ ಸ್ಮರಿಸು
ತೇದ ಭಂಗಗಳ ನೆನೆದು ವಿನಮ್ರತೆ
ಐದಿ ಇತ್ತವನ ಸಂಸ್ಮರಿಸು

೫.

ನಿನ್ನಂದಾಗುವ ಪರಹಿತ ಸಾಧನ
ವನ್ನು ಮಾಡುತಲೆ ಮುಂದಾಗು.
ನಿನ್ನಂತೆಲ್ಲರು ಸುಖ ಜನರಾದರೆ
ಸನ್ನುತನೆದುರಿಗೆ ತಲೆಬಾಗು

# ಪೆದ್ದನಂತೆ ನಿಲ್ಲಬೇಡ ಉದ್ಯಮಕ್ಕೆ ಬಲಸುರಿ !

ಎಲ್ಲ ಕಡೆಯು ತಿಮಿರರಾಶಿ ಹಾದಿ ಮಾತ್ರ ತೋರದದೆ ?
ಎಲ್ಲರೊರೆದರಿರುಳು ಹೋಯ್ತು ನಿನಗೆ ಬೆಳಕು ಸೋರದದೆ ?

ಹಗಲು ಬಂದಿತೆಲ್ಲ ಬೆಳಕೆ – ಎಂದು ನಲಿವರೆಲ್ಲರು ।
ಸಿಗದು ನನಗದೇಕೋ ? ಆರು ಇನಿತ ಕೂಡ ಚಿಲ್ಲರು ॥

ಏನೋ ಕಾಂತಿ ಏನೋ ಭ್ರಾಂತಿ ಶಾಂತಿಗೊಂದು ಸೊನ್ನೆಯೇ ।
ಮೌನವೇನೋ ಗಾನ ವೇನೋ ಕರದಿ ಬರಿಯ ದೊನ್ನೆಯ ॥

ಕಂದ ಕಂಡೆ ನಿನ್ನ ಬನ್ನ ಕತ್ತಲಂತರಂಗದಿ.
ಸಂದು ಬಾಹ್ಯ ಜ್ಯೋತಿಯನ್ನು ನುಂಗುತಿಹುದು ಭಂಗದಿ ॥

ಎಷ್ಟು ಸೂರ್ಯರಿದ್ದರೇನು ಅಂತರಿಕ್ಷ ಮುಚ್ಚಿರೆ ।
ಇಷ್ಟು ಯತ್ನ ಮಾಡಿ ಅದನು ತೆರೆಯಾ ಭಾಗ್ಯ ನುಚ್ಚಿರೆ ॥

ಅಳುವಿನಿಂದ ಅಳುಕಿ ನಿಂದ ಸಾಧಿಸುವೆ ಅದೇನನು ।
ಬಳಲಿ ತೊಳಲಿ ನೆಲದಲುರುಳಿ ನೀನು ಪಡೆವುದೇನನು ॥

ಎದ್ದು ನಿಲ್ಲು ಗದರಿನಿಲ್ಲು ಮೆಟ್ಟಿನಿಲ್ಲು ಮೈ ಮುರಿ ।
ಮೊದ್ದನಂತೆ ನಿಲ್ಲಬೇಡ ಉದ್ಯಮಕ್ಕೆ ಬಲಸುರಿ ॥



# ಹಿರಿಮೆ ತೊರೆದು ಕಿರಿಯನಾಗಿ ಬಾರೋ ಆರಲಾಶ್ರಮ

ದಾರಿ ತಪ್ಪಿ ಎಲ್ಲೊ ಅಲೆದೆನೆಂದು ವತ್ಸ ನೊಂದೆಯ ।
ಮೂರು ಮಾರಿಗೊಂದು ದಾರಿ ಅವುದನ್ನು ಹೊಂದೆಯ ॥

ಯಾವ ದಾರಿ ಎತ್ತ ಪೋಪ ಪಥನವೆಂದು ಭಾವಿಸಿ ।
ಸಾವರಿಸುತ ಚಿಂತಿಸಿದೆಯ ಏನೊ ಹಿಡಿದು ಧಾವಿಸಿ ॥

ಎಲ್ಲೋ ಹೋದೆ ಎಲ್ಲೋ ನಿಂತೆ ಇಲ್ಲಿಯ ಪಥ ಪೂರಕ ।
ಚೆಲ್ಲಿ ದಿಬ್ಬಿ ನೇರ ಕಂಡುದೆಲ್ಲೊ ಬಹು ವಿದಾರಕ ॥

ತಿರುವು ಮುರುವು ಲೆಕ್ಕವಿಲ್ಲ ನೆಲೆಯು ಮಾತ್ರ ಕಾಣದು ।
ಹೊರಡುವಲ್ಲಿ ತಪ್ಪುದಾರಿ ಹಿಡಿದೆ ಗುರಿಯ ಕಾಣದು ॥

ಮೊದಲದನ್ನು ಹಿಂದೆ ಬಿಟ್ಟು ಹೊಸದರತ್ತ ಸಾಗಿದೆ ।
ಅದರಿ ಚದರಿ ಅಲೆದೆಯಲ್ಲ ನಿನಗದೇನು ಆಗಿದೆ ॥

ತಿರುಗು ಹಿಂದೆ ತಿರುಗು ಇತ್ತ ತೋರ್ಪೆ ನಿನ್ನ ಆಶ್ರಮ ।
ಹಿರಿಮೆ ತೊರೆದು ಕಿರಿಯನಾಗಿ ಬಾರೋ ಆರಲಾಶ್ರಮ ॥

## ಈಸು ಕಾಯಿಸ ನಿಮ್ಮ ನಿಜಕುಂ, ಎಲ್ಲ ನಿಮ್ಮದೆ, ಧಾವಿಸಿ

೧

ದೇವದೇವನ ಸ್ಮರಣ ಮಾಡಿರಿ ಜನ್ಮ ಸಾರ್ಥಕವಾಗಲಿ ।
ಜೀವಮಾತ್ರರ ಪಾಲಕನು ಓಂ ಅವನದೇ ನೆನಪಾಗಲಿ ॥

೨

ಮಾನವಸ್ತುತಿ ಮಾಡಿ ನೀವ್ಗಳು ಪಡೆವುದೇನಿಗೆ ಬಾಗದೆ ?
ದೀನ ಜನ ತಾವೇ ಸ್ವತಃ ಪರರಾಶ್ರಿತರು ಗೊತ್ತಾಗದೆ ?

೩

ಏನು ಬೇಕದ ವಿಭುವಿನಲ್ಲಿಯೆ ಬೇಡಿರಮರನ ಮಕ್ಕಳೇ ।
ನೀನು ತಾನೆಂಬುಕ್ತಿ ಸಲ್ಲದು ಏಕದೇವನದೇ ಕಳೆ ॥

೪

ಆದರಿಷ್ಟನು ನೆನಪಿನಲ್ಲಿಡಿ – 'ದೈವ' ಎನ್ನುತ ಕೂಡದೆ ।
ಮೋದಿ ಪುರುಷಾರ್ಥಿಗಳೆ ಆಗಿರಿ ಆತ್ಮಸತ್ವವ ದೂಡದೆ ॥

೫

'ಈಯೆ' ಓಂ ಪ್ರಭು ಹೊರಗೆಯಿಲ್ಲದೆ ನಿಮ್ಮೊಳಗೆಯೇ ರಾಜಿಪ ।
ಕೈಯ ಚಾಚಲು ಹೊರಗೆ ನೀವೇ ! ಎಲ್ಲ ಕಡೆಯು ವಿರಾಜಿಪ ॥

೬

ನಿಮ್ಮ ಮೌನದ ಕರೆಯನೇ ಅವ ಕರುಣೆಯಿಂದಲೆ ಆಲಿಪ ।
ನಿಮ್ಮಲೇ ಕಾಮಿತವ ಸಾಧಿಪ ಶಕ್ತಿ ತುಂಬಿಸಿ ಪಾಲಿಸ ॥

೭

ಎಂದು ಆಲಸಿಗೆ ನಾನಾ ದೇವನೊಲಿಯನು ಇಷ್ಟು ನೆನಪಿಡಿ ಜೀವರೇ ।
ಸಂದ ಯತ್ನಕೆ ಒಲಿವ ಆತ್ಮಸಮರ್ಪಣಕೆ ನೀವೀವರೇ ॥

೮

ಓ ಸುಧಾಂಬುಧಿ ಮತಿಯನೆರೆ – ಎಂದಿಷ್ಟೆ ಕೋರಿರಿ ಭಾವಿಸಿ ।
ಈಸು ಕಾಯಿಸ ನಿಮ್ಮ ನಿಜಕುಂ ಎಲ್ಲ ನಿಮ್ಮದೆ ಧಾವಿಸಿ ॥

ಬಾಗದೆ = ಬಗ್ಗುವುದನ್ನು ಬಿಟ್ಟು. ಮೋದಿಪುರಷಾರ್ಥಿ = ಹರ್ಷಯುಕ್ತ ಸಾಧಕ. ದೂಡದೆ = ದೂರತಳ್ಳದೆ. ಈಯೆ ....... ವಿರಾಜಿಪ = ಹೊರಗಿರುವವನೇ ಕೊಡಬಲ್ಲ ಅಂತರ್ಯಾಮಿ ನಿಮ್ಮಲ್ಲೇ ಇದ್ದಾನಲ್ಲ. ಹೊರಗೆ ಇರುವವನಿಂದ ಏನನ್ನಾದರೂ ಪಡೆಯಲು ಕೈ ಚಾಚಬೇಕಾಗುವುದು. ನೀವು ಅವನಿಂದ ಹೊರಗಿದ್ದೀರಾ ? ಅತ್ಮಸಮರ್ಪಣಕೆ ನೀವೀದರೆ = ನೀವು ಆತ್ಮಸಮರ್ಪಣ ಮಾಡಿಕೊಳ್ಳುವದಾದರೆ. ಈಸು ಕಾಯಿಸ = ಸ್ವಲ್ಪವೂ ಕಾಯುವಂತ ಮಾಡುವುದಿಲ್ಲ.



## ಮಾಸದಂಥ ನಗೆಯನೆನ್ನ ಮೊಗಗೆ ಪೂಸಿ ತೋರಿಸು

೧

ಆರನಿನ್ನು ಮೊರೆಯ ಹೊಗಲಿ ನಿನ್ನ ನುಳಿದು ಲೋಕದಿ ।
ಬೇರದಾರು ಪಾರು ಮಾಡ ಬಲ್ಲರೆನ್ನ ಶೋಕದಿ ॥

೨

ಲೋಕದಲ್ಲಿ ಕುಣಿಪ ಜನಕೆ ಕೊರತೆಯಿಲ್ಲವೆಂದಿಗೂ ।
ನಾಕವಿಲ್ಲೆ ತೋರ್ಪೆವೆಂದು ಕೂಗುತಿರುವ ಮಂದಿಗೂ ॥

೩

ಎಷ್ಟು ಕುಣಿದರೇನು ಬಂತು ಶಾಂತಿಯೊಂದು ಸಲ್ಲದೆ ।
ಕಷ್ಟ ವೆಷ್ಟೊ ಅಷ್ಟಕಷ್ಟೆ ಬರಿಯ ಬೆವರದಲ್ಲದೆ ॥

೪

ಅರಿತೆನೀಗ ಸತ್ಯವಾಗಿ ನೀನೆ ನೃತ್ಯದಾತನು ।
ತೊರೆದು ನಿನ್ನ ಬೇರೆಯಿಲ್ಲ ನಿಜಕು ಕುಣಿಸುವಾತನು ॥

೫

ಸಾಕು ಕುಣಿತ ಬರಿದೆದಣಿದೆ ಬಂದೆ ನಿನ್ನ ಜಾಡಿಗೆ ।
ನೀ ಕುಣಿಸುವ ಹಾಗೆ ಕುಣಿವೆ ಎನ್ನ ಬದುಕ ಬಾಡಿಗೆ ॥

೬

ಭಜಿಸೆ, ನುತಿಸೆ, ಧನಕೆ, ಬಲಕೆ ಎನ್ನ ಪರಮ ವಂದಿತ ।
ತ್ಯಜಿಸಿ ಎಲ್ಲ ನಿನಗೆ ಮಣಿದೆ ದೇವ ಸದಭಿನಂದಿತ ॥

೭

ಓ ಸುಧಾರಸಾಬ್ಧಿ! ಎರಚಿ ಎರಡು ಹನಿಯ ಸೋರಿಸು ।
ಮಾಸದಂಥ ನಗೆಯನೆನ್ನ ಮೊಗಗೆ ಪೂಸಿ ತೋರಿಸು ॥

# ಎಲ್ಲರೊಡನೆ ಸಾಮರಸ್ಯ ಬೆಳೆಸೆ ಬಾಳ್ಕೆ ಮಾನವೇ !

೧

ಇಷ್ಟು ಸಾಕೆ ಅಷ್ಟು ಬೇಕೆ ಇನ್ನು ಸಾಲದಾಯಿತೆ ।
ಕಷ್ಟ ಆದುರಾಶೆ ಹಿಸುಕ ಬರಿಯ ಕೈಯಲಾಯಿತೆ ?

೨

ನಾಲ್ಕು ಮಹಡಿ ಆರು ಮಹಡಿ ಎಂಬು ಮಹಡಿಯಾಯಿತು.
ನಾಲ್ಕು ಜನರ ಮುಂದೆ ಹಿರಿಮೆಯನ್ನು ತೋಡಿಯಾಯಿತು.

೩

ನೂರು ಉಳಿದರೇನು ಬಂತು ಕರುಬು ಇದೆಯೊ ಸಾಸಿರ ।
ಯಾರದೆಲ್ಲ ಎಲ್ಲ ಸರಕು ? ಗುಡಿಸಿಲೆಂದು ಸಾವಿರ ॥

೪

ಲೋಭಿ! ಎಲ್ಲ ನನ್ನದೆಂದು ಕುಣಿವ ಏಕೆ ದಂಭದೆ ?
ಲಾಭ ನಿನಗೆ ನಷ್ಟ ಪರಗೆ ಇದಕದೆಂಥ ಜಂಭವೇ ?

೫

ನಿನ್ನ ಕಾಸದೊಂದು ಇಲ್ಲ ಕವಡೆಯೊಲ್ಲಲಾರೆಯ್ಯೆ ।
ಚಿನ್ನ, ಬೆಳ್ಳಿ ಎಲ್ಲ ಮರೆಯೊ ಏನುಕೊಳ್ಳಲಾರೆಯ್ಯೆ ॥

೬

ಬೆವರು ಸುರಿಸಿಗಳಿಸಿದೆಷ್ಟೊ ಅಷ್ಟೆ ನಿನ್ನ ಹೋಳಿಗೆ.
ಅವರ ಇವರ ನೆಚ್ಚಿದೆಯೇ ? ಖಾಲಿ ನಿನ್ನ ಜೋಳಿಗೆ.

೭

ಎಲ್ಲವೂ ಸುಧಾಂಬುಧಿಯದೆ – ಎಲ್ಲವವನ ದಾನವೇ ।
ಎಲ್ಲರೊಡನೆ ಸಾಮರಸ್ಯ ಬೆಳೆಸೆ ಬಾಳ್ಗೆ ಮಾನವೇ ॥



# ಘಾಸಿಹೊಂದದೆ ಸರ್ವರೂ ನಗು ನಗುತಲಿರುಂತಾಗಲಿ

೧

ಎಷ್ಟು ಬಾಗಿಲ ಮುಂದೆ ನಿಂತೆನೊ ಎಷ್ಟು ರೋದನಗೈದೆನೋ ?
ಶಿಷ್ಟರೆಲ್ಲರು ತಮ್ಮ ಕುಂದನೆ ತೋಡಿಕೊಂಡರು – ನೊಂದೆನೋ ॥

೨

ಜೀವರೇನನು ಕೊಡಲು ಬಲ್ಲರು ಕಡು ಪರಾಶ್ರಿತರೆಲ್ಲರು ।
ಸಾವ ಮುನ್ನವೆ ಸೌಧ ಕಟ್ಟುವ ಮುಗ್ಧರೇ ಅವರೆಲ್ಲರು ॥

೩

ದ್ರವ್ಯ ವಿದ್ದರೆ ಭಾಗ್ಯ ಬಂದಿತೆ ಎಲ್ಲ ದ್ರವ್ಯದ ದಾಸರು ।
ನವ್ಯ ಚಿಂತನ ಅತ್ತಸಲ್ಲದು ಕೊಡುವ ಬಗೆಗೆ ಉದಾಸರು ॥

೪

ಹಂಚಿ ತಿನ್ನುವ ಶ್ರುತಿಯು ಅವರಿಗೆ ನುಂಗಲಾರರ ತುತ್ತಲೆ ।
ಹೊಂಚಿ ಕಸಿಯುವ ರಕ್ತ ಬಸಿಯುವ ನೀತಿಯವರಿಗೆ ಸುತ್ತಲೆ ॥

೫

ದೇವ ದಾನಿಯು ನೀನು ಅನ್ಯರ ಬರಿದೆ ಬೇಡದರೇಂ ಫಲ ।
ಯಾವುದಿದೆಯೋ ಎಲ್ಲ ನಮ್ಮದೆ ಎಂಬುದವದಿರ ದುಷ್ಫಲ ॥

೬

ಅನ್ಯರೈಸಿರಿ ನಾಶವಾಗಲಿ ಎಂದರೆಂದಿಗು ಆಶಿಸೆ ।
ಧನ್ಯರಾಗುತರೆಲ್ಲರೊಂದಿಗೆ ಉಂಬದಿನ ಬಹುದಾಶಿಸೆ ॥

೭

ಓ ಸುಧಾಸಾಗರನೆ ಬಡವರು – ಬಲ್ಲಿದರು ಒಂದಾಗಲಿ ।
ಘಾಸಿಹೊಂದದೆ ಸರ್ವರೂ ನಗುನಗುತಲಿರುವಂತಾಗಲಿ ॥

## ಕಾತರಿಸದೆ ಯತ್ನ ಮಾಡು, ಎಲ್ಲ ನಿನ್ನ ಅಂದಿಗೆ

೧

ಯಾರ ಬೇಡಿ ಸಾಲ ತಂದು ಸದನ ರಚಿಪ ಯೋಚನೆ ?
ಯಾರದೆಲ್ಲ ಸಿರಿಯೊ ಮುಗ್ಧ ಎಂದು ತಮ ವಿಮೋಚನೆ ?

೨

ನೀನು ಕೊಳುವ ಮುನ್ನ ಕೊಡುವ ಚಿಂತೆ ಮಾಡು ಮೂಢನೆ ।
ಏನೊ ಗೈವೆನೆಂದು ಬೀಗೆ ಸರ್ವಸಾಕ್ಷಿ ಗೂಢನೇ ?

೩

ವೇದ ಓದಿ ಪಡೆದುದೇನು ? ಶಬ್ದ ಜಾಲವಷ್ಟೆಯೇ ।
ವೇದ ಬಾಳಿಗಿಳಿಯದಾಗೆ ಕಾಲ ನಷ್ಟವಷ್ಟೆಯೇ ॥

೪

ಅನ್ಯರರ್ಜನೆಯದು ಅವರ ತುತ್ತು ಮಾತ್ರ ಮಾನವ ।
ಅನ್ಯರನ್ನ ನಿನಗೆ ಬೇಡ ಬೇಡ ಬೇಡ ದಾನವ ॥

೫

ಕೊಡದೆ ಕೊಳುವುದದೆಯೆ ಸಾಲ ತಂದ ಸಾಲ ಸಾಲದೇ ?
ದುಡಿಮೆ ಬಾಳಿನಡಿಯ ಪಾಯ; ಬೀಳ್ವೆ ಏಕೆ ಜಾಲದೆ ?

೬

ದುಡಿದು ತಿನ್ನು ನಲಿದು ತಿನ್ನು ನಿಜಕು ಭಕ್ತನಾಗುವೆ ।
ದುಡಿಮೆ ಬಾಳ ತಳದ ಪಾಯ ಅಂದು ಶಕ್ತನಾಗುವೆ ॥

೭

ಭೀತಿ ಏಕೆ ಆ ಸುಧಾಬ್ಧಿ ಎಂದು ನಿನ್ನ ಒಂದಿಗೆ ।
ಕಾತರಿಸದೆ ಯತ್ನಮಾಡು ಎಲ್ಲ ನಿನ್ನ ಅಂದಿಗೆ ॥



## ಸೋತೆಯಾದರೆ ದೋಷ ನಿನ್ನದೆ ಜೈಸು ನೀ ಕೇಡ

೧

"ಭಿಕ್ಷಗೋಸುಗ ಬಾಗಲೆನಿತನೊ ತಟ್ಟಿ ನಾ ನೊಂದೆ ।
ಕುಕ್ಷಿಗೊಂದೇ ತುತ್ತನೀಯಲು ಪಟ್ಟ ಪಾಡೊಂದೆ ?

೨

"ಆವ ಬಾಗಿಲು ತೆರೆಯದಾಯಿತು ಸೊನ್ನೆಯೇ ಭಿಕ್ಷೆ ।
ಆವ ಜನ್ಮದ ಪಾಪ ಫಲಿಸಿತೊ ? ಏತಕೀ ಶಿಕ್ಷೆ ?

೩

ಎಂದು ಹಂಬಲಿಸುತ್ತ ಕುಳಿತೆಯ ? ಬರಿದೆ ಓ ಮೂಢ ?
ಎಂದು ಮರೆಯದ ನೀತಿ ನೆನಪಿಡು ತತ್ವವಿದು ಗೂಢ ॥

೪

ಕರ್ಮ ಭೂಮಿ ಇದೇ ತಪೋವನ ತಪವೆ ನಿಜಕರ್ಮ ।
ಧರ್ಮಬೇಕೆ ? ಕಾರ್ಯವಹನವೆ ಧರ್ಮದಾ ಮರ್ಮ ॥

೫

ದುಡಿಮೆಗಂಜುವ ವೃತ್ತಿಯಿಂ ನೀ ದೂರವೇ ಸರಿಯೈ ।
ದುಡಿದು ಗಳಿಸೈ ಅಲ್ಪವಾದರು ಅಧಿಕವೇ ಸರಿಯೈ ॥

೬

ದಾತನೀವನು ಕರ್ಮ ಫಲವನು ಶಂಕೆಯೇ ಬೇಡ ।
ಸೋತೆಯಾದರೆ ದೋಷನಿನ್ನದೆ ಜೈಸು ನೀ ಕೇಡ ॥

## ಮಧುರ ಮಧುರ ಸವಿಯ ಸವಿದು
## ಮಿತ್ರ ಹೊಂದು ತೃಪ್ತಿಯ !

ಅನ್ನ ಅನ್ನ ಅನ್ನ ಎಂದು ಬನ್ನ ಪಡುವೆ ಏತಕೆ ?
ಅನ್ನದಾತನನ್ನು ಬಿಟ್ಟು ಕಾತರಿಸುವುದೇತಕೆ ? ॥ ೧ ॥

ಸೃಷ್ಟಿಯಲ್ಲಿ ಅನ್ನವಿಲ್ಲದೆಡೆಯನೊಂದ ತೋರಿಸು ।
ಇಷ್ಟವಿಲ್ಲ ದುಡಿಯಲೆನ್ನ ಕಣ್ಣ ಪನಿಯ ಸೋರಿಸು ॥ ೨ ॥

ಕೆಲರು ಸ್ವಾರ್ಥದಿಂದ ಕೂಡಿ ಇಡುವರಯ್ಯ ಅನ್ನವ ।
ಸಲುಹು ಸ್ವಲ್ಪ ಕಾಲ ಕೊನೆಗೆ ಪಡೆದರವರು ಬನ್ನವ ॥ ೩ ॥

ನಿಜರು ಹಸಿದು ಬಂದ ಸಖನ ಮುಖಕೆ ಮಸಿಯ ತೀಡುತ ।
ಭುಜಿಪನವನ ಮುಂದೆ ತನ್ನ ದೈತ್ಯ ವೃತ್ತಿ ನೀಡುತ ॥ ೪ ॥

ಆದುವು ಮನೆಯೆ ? ನಿಜಕು ಮಸಣ ಮಂದೆ ಸಾಗು ಬೇರೆಡೆ ।
ಪದವ ಹಾಕು ಕೊಡುವರಿಹರು ಮುಂದಕಿಹುದು ಏರೆಡೆ ॥ ೫ ॥

ಅಲ್ಲ ಸಖನೆ ! ಬೇಡಲೇಕೆ ? ನೀನೇ ದುಡಿಯಬಾರದೆ ।
ಎಲ್ಲಿ ಬೆವರು ಅಲ್ಲಿ ತವರು ನೊಂದೆ ನೋಯಲಾರದೆ ॥ ೬ ॥

ಎಷ್ಟು ಬಹುದೋ ಅಷ್ಟೆ ಬಹಳ ತಿಂದು ನೀನದಂ ನಲಿ ।
ಕಷ್ಟದಲ್ಲಿ ಇಷ್ಟವಿಹುದು ತುಷ್ಟಿಯಿಂದ ನೀನಲಿ ॥ ೭ ॥

ಸುಧೆಯ ಸಾಗರದಲೆ ಮುಳುಗಿ ತಿಳಿಯದಾದೆ ಗುಪ್ತಿಯ ।
ಮಧುರ ಮಧುವ ಸವಿದು ಸವಿದು ಮಿತ್ರ ಹೊಂದು ತೃಪ್ರಿಯ ॥ ೮ ॥



## ಮೋಸ ಹೋಗದೆ ಹೆಜ್ಜೆ ಮುಂದಿಡು
## ಪೂರ್ಣವಪ್ಪುದು ಆಶಯ

೧
ನಿನ್ನ ನೀನೇ ನುತಿಸಿಕೊಂಡರೆ ಏನ ಸಾಧಿಪೆ ಬಾಳಲಿ ?
ನನ್ನ ಮಿತ್ರನೆ ನಿನ್ನ ಮುನ್ನಡೆ ನಿನ್ನ ಬದುಕನು ಆಳಲಿ ॥

೨
ನಿಂದೆಗಂಜಲೆಬೇಕು ವತ್ಸನೆ ನೀನು ಕಶ್ಮಲನಾಗಿರೆ ।
ವಂದನೆಯ ನಿಂದನೆಗೆ ಸಲ್ಲಿಸು ನೀನು ನಿರ್ಮಲನಾಗಿರೆ ॥

೩
ನಿಂದಕರು ನಿಜ ಸಖರು ತಿಳಿಯಿದನೆಂದು ಮರೆಯಲೆಬಾರದು ।
ನಿಂದೆಗೆ ಪ್ರತಿನಿಂದೆ ಸಲ್ಲದು ಶಾಂತಿಯನ್ನದು ತಾರದು ॥

೪
ನಿನ್ನ ಶುದ್ಧಿಗೆ ಸತತ ಸಾಧನ ನಿಂದೆ ಎಂಬುದ ನೀನರಿ ।
ಸನ್ನಿಯಿದೆ ನೀ ನಿನ್ನ ತಿದ್ದಿಕೊ ಮುಂದೆ ಸಗುವೆ ಈ ಪರಿ ॥

೫
ನಿಂದಕರ ದೂಷಿಸಲು ಬರದಿರಲೈಯ್ಯ ನಿನ್ನಯ ನಾಲಗೆ ।
ನಿಂದಕೋದ್ಧೃತಿಗಾಗಿ ಪ್ರಾರ್ಥಿಸು । ಸಾಕು ನಿನ್ನಯ ಪಾಲಿಗೆ ॥

೬
ಆರನೂ ನೀನೆಂದು ನಿಂದಿಸಬೇಡ ಮಿತ್ರನೆ ಎಚ್ಚರ ।
ಬಾರಿ ಬಾರಿಗು ಮಧುರವಾಣಿಯನಾಡುತಿರು ಓ ಸಚ್ಚರ ॥

೭
ಆ ಸುಧಾಂಬುದಿ ದಾರಿ ತೋರುವನಿದರಲಿಲ್ಲವೋ ಸಂಶಯ ।
ಮೋಹ ಹೋಗದೆ ಹೆಜ್ಜೆ ನೀನಿಡು ಪೂರ್ಣವಪ್ಪುದು ಆಶಯ ॥

ನಿಂದರೋದ್ಧೃತಿಗಾಗಿ = ನಿಂದಕರ ಉದ್ಧಾರಕ್ಕಾಗಿ.
ಸಚ್ಚರ = ಸತ್ಯದಲ್ಲಿ ಸಂಚರಿಸುವವನು.

# ಬಿಡಲುಲಾರೆ - ನಿನ್ನ ನೆರಳ ಎನ್ನ ಜೀವದಾತನೇ !

೧

ಬಿಡಲುಲಾರೆ ನಿನ್ನ ನೆರಳ ಎನ್ನ ಜೀವ ದಾತನೇ ।
ಕೊಡುವ ಸೈಯ ದೊರೆಯು ನೀನು ಜೀವನ ಪ್ರದಾತನೆ ॥

೨

ಅವರ ಇವರ ಬೇಡಿ ಕೊಂಡೆ ಬಾಯಿ ಬರಿಯ ದಾಯಿತು ।
ಆದರೆ ಇವರೆ ಇವರೆ ಅವರೆ ಎಲ್ಲ ಕಗ್ಗದಾಯಿತು ॥

೩

ನಿನ್ನೆ ಬರು ಬಾರದಿತ್ತೆ ? ಇಂದು ನನ್ನ ಅರ್ಪುವೇನ್ ?
ನನ್ನ ಹಸ್ತ ಚನ್ನವಿತ್ತು ಈಗ ಹುಡಿಯ ತರ್ಪುವೇನ್ ॥

೪

ಎನಿಸು ನೆಪಗಳಾಗಬೇಕು ಹುಸಿಯ ನುಡಿಯ ನಾಲಿಗೆ ।
ಎನಿಸು ಪೇಳ್ವನೇನು ಸುಳ್ಳ ಒಂದು ಬೀಳೆ ಪಾಲಿಗೆ ॥

೫

ಅತ್ತ ಕಾವು ಇತ್ತ ಕಾವು ಸುತ್ತ ಮುತ್ತ ಕತ್ತಲೆ ।
ಹೊತ್ತಿ ಬುಗ್ಗೆನುತಿದೆ ಹುರಿಯೆ – ಶಾಂತಿ ಅತ್ತ ಲತ್ತಲೆ ॥

ಹಣವನೆಲ್ಲಿ ತಂಪು ಮುಗ್ಧ ? ದಾನದಲ್ಲಿವೆ ।
ಹಣವ ದೀನಗಿತ್ತು ನೋಡು – ಮಾನದಲ್ಲಿವೆ ॥

ಹಿರಿಮೆ ಹರಿದು ಬಹುದು ನಿನ್ನುದಾರಭಾವದಿ ।
ಸರನೆ ಜರಿದು ತೊಬ್ಬಿದುವುದು ಬೆಳಗೆ ಜಾವದಿ ॥



॥ ಓಂ ॥

## ವೇದ ಧರ್ಮ ಪರಿಪಾಲನ ಸಭಾ (ರಿ).

ಶ್ರೀ ಮಹಾಗಣಪತಿ ದೇವಸ್ಥಾನದ ಆವರಣ

3, ಈಸ್ಟ್ ಪಾರ್ಕ್ ರಸ್ತೆ, ಮಲ್ಲೇಶ್ವರಂ, ಬೆಂಗಳೂರು-560 003.






## ಸನ್ಮಾನ ಪತ್ರ

ಶ್ರೀಮಾನ್ ವೇ॥ ಬ್ರ॥ ಶ್ರೀ॥ **ಪಂ॥ ಸುಧಾಕರ ಚತುರ್ವೇದಿ** ಯವರಿಗೆ

ಭಾರತ ಸಂಸ್ಕೃತಿಯ ವೇದಧರ್ಮಕರ್ಮಾನುಷ್ಠಾನಗಳು ಶಿಥಿಲವಾಗುತ್ತಿರುವುದನ್ನು ಮನಗಂಡು ವೇದಾಭಿಮಾನಿಗಳು, ವೇದಜ್ಞರು ಅದನ್ನು ಪುನರುಜ್ಜೀವನಗೊಳಿಸಬೇಕೆಂದು ಮಲ್ಲೇಶ್ವರದಲ್ಲಿ ಮಹಾ ಸಭೆಯನ್ನು ಸೇರಿಸಿ ಈ ಸಂಸ್ಥೆಯನ್ನು 1949ರಲ್ಲಿ ಸ್ಥಾಪಿಸಿದರು. ಈ ಉದ್ದೇಶಗಳನ್ನು ನೆರವೇರಿಸಲು ಶ್ರೀಮಠಸ್ಥ ಮಠಾಧಿಪತಿಗಳ ಆಶೀರ್ವಾದ ಮತ್ತು ಅನುಗ್ರಹಗಳನ್ನು ಪಡೆದು ವಿದ್ವಾಂಸರುಗಳ ಸಮ್ಮೇಳನಗಳನ್ನು ನಡೆಸುವುದು, ಪ್ರಚಾರೋಪನ್ಯಾಸಗಳನ್ನು ನಡೆಸುವುದು, ಸಾಮೂಹಿಕ ಉಪನಯನಗಳನ್ನು ನೆರವೇರಿಸುವುದು, ವೇದ ಪುಸ್ತಕಗಳನ್ನು ಅರ್ಥ ಸಹಿತ ಪ್ರಕಟಿಸುವುದು. ವೇದ, ಸಂಸ್ಕೃತ ಮತ್ತು ಆಧುನಿಕ ವಿದ್ಯಾಭ್ಯಾಸ ಮಾಡುತ್ತಿರುವ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿ ವೇತನವನ್ನು ವಿತರಿಸುತ್ತಿರುವುದು, ವೇದ, ಸಂಸ್ಕೃತ ಪಾಠಶಾಲೆಗಳನ್ನು ನಡೆಸುವುದು, ವೇದಾಧ್ಯಾಯಿಗಳು ಮತ್ತು ಮುಂತಾದವರುಗಳಿಗೆ ಯಥೋಚಿತ ಸನ್ಮಾನವನ್ನು ಮಾಡುವುದು ಮೊದಲಾದ ಕಾರ್ಯಕ್ರಮಗಳನ್ನು ನಡೆಸುತ್ತಿರುವುದು ಸರಿಯಷ್ಟೆ. ಸಭೆ ತನ್ನ ಸ್ವಂತ ಕಟ್ಟಡವನ್ನು ಹೊಂದಿ ಅಲ್ಲಿ ಕಾರ್ಯಾಲಯ, ಪಾಠಶಾಲಾ ಮತ್ತು ಪುಸ್ತಕ ಭಂಡಾರವನ್ನು ನಿರ್ವಹಿಸುತ್ತಾ ಇದೆ. ಹಾಗೂ 1999ರಲ್ಲಿ ಸುವರ್ಣ ಮಹೋತ್ಸವವನ್ನು ಆಚರಿಸಿ ಆ ಸಂದರ್ಭದಲ್ಲಿ ವೇದವಿದ್ವಾಂಸರುಗಳನ್ನು ಸನ್ಮಾನಿಸಿದೆ. ಸನಾತನ ಧರ್ಮ ಕರ್ಮಾನುಷ್ಠಾನಗಳ ಆಚರಣೆಯಲ್ಲದೇ, ಕರ್ನಾಟಕದಲ್ಲಿ ವೇದ ಸಮ್ಮೇಳನಗಳನ್ನು ಸಭೆ ಅತ್ಯಂತ ವಿಜೃಂಭಣೆಯಿಂದ ನಡೆಸುತ್ತಾ ಇದೆ. ಈ ಸಭೆಯ ಪುರೋಭಿವೃದ್ಧಿಗೆ, ಪ್ರಚಾರ ಕಾರ್ಯಗಳಿಗೆ, ವಿಶೇಷವಾಗಿ ಶ್ರಮಿಸಿ. ಮತ್ತು ಸೋದರ ಸಂಸ್ಥೆಗಳ ಅಭಿವೃದ್ಧಿಗಾಗಿ ದುಡಿಯುತ್ತಿರುವ ವೇದಾಭಿಮಾನಿಗಳೂ ವೇದಧರ್ಮನಿರತರೂ ಆಗಿರುವವರಲ್ಲಿ ಅಗ್ರಗಣ್ಯರಾದ ನೀವು ಸಲ್ಲಿಸಿರುವ ಸೇವೆಗಾಗಿ ನಿಮಗೆ

ಈ ಸಮ್ಮೇಳನದಲ್ಲಿ ಸಭೆಯು

**ವೇದ ಭೂಷಣ**

ಎಂಬ ಪ್ರಶಸ್ತಿಯನ್ನು ನೀಡಿ ಗೌರವಿಸುತ್ತಿದೆ. ನೀವು ದೀರ್ಘಾಯುಷ್ಮಂತರಾಗಿ ಇತೋಪ್ಯತಿಶಯವಾದ ಸೇವೆಯನ್ನು ಸಲ್ಲಿಸುವಂತೆ ವೇದಪುರುಷನನ್ನು ನಾವು ಪ್ರಾರ್ಥಿಸುತ್ತೇವೆ.

ಅಧ್ಯಕ್ಷರು. ಗೌ॥ ಕಾರ್ಯದರ್ಶಿಗಳು.

ಗೌ॥ ಕೋಶಾಧಿಕಾರಿ. ತಾರೀಖು 18.5.2000 ಗೌ॥ ಕಾರ್ಯದರ್ಶಿಗಳು



LET NOBLE THOUGHTS COME TO US FROM EVERY SIDE : RIGVEDA

# BHARATIYA VIDYA BHAVAN

## SRI GURU GANGESHWARANAND VEDARATNA PURASKAR

1999

## CERTIFICATE OF EXCELLENCE

*We the members of the Bharatiya Vidya Bhavan and the devotees of Sri Guru Gangeshwaranandji, confer the certificate of excellence on*

*Pt. Sudhakar Chaturvedi*

*for the year 1999 for the services rendered on the spread of*

*Veda & Sanskrit in General*

*and for his contribution for the spread of Veda.*

| | | |
|---|---|---|
| *N. Ramanuja* | *D. Veerendera Heggade* | *Lekhraj Mewani* |
| Chairman | Chairman, Panel of Jury | Devotee |
| Bharatiya Vidya Bhavan | Sri Gurugangeshwaranand Vedaratna Puraskar | Sri Guru Gangeshwaranand Maharaj |



ಪಂಡಿತ್ ಸುಧಾಕರ ಚತುರ್ವೇದಿ



ಪೇಜಾವರ ಮಠದ ವಿಶ್ವೇಶ್ವರ ತೀರ್ಥರೊಂದಿಗೆ ಪಂಡಿತ್‌ಜೀ ಸಮಾಲೋಚನೆಯಲ್ಲಿ




"ವೇದ ವೇದಾಂಗ ಪುರಸ್ಕಾರ" ಬಿರುದಿತ್ತ ಸನ್ಮಾನ ಸಮಾರಂಭ



ಸಿರಿಭೂವಲಯ ಪುಸ್ತಕ ಬಿಡುಗಡೆಯ ಸಮಾರಂಭದಲ್ಲಿ ರಾಜ್ಯಪಾಲ ಶ್ರೀ ಟಿ.ಎನ್. ಚತುರ್ವೇದಿ ಮತ್ತು ಪಂಡಿತ್ ಸುಧಾಕರ ಚತುರ್ವೇದಿ



ಚಿತ್ರಕಾರ ಶ್ರೀ ಬಿ.ಕೆ.ಎಸ್. ವರ್ಮರವರೊಂದಿಗೆ ಸುಧಾಕರರು



ಹರಿದ್ವಾರದ ಗುರುಕುಲ ಕಾಂಗ್ಡಿಗೆ ಪಂಡಿತ್‌ಜೀ ಭೇಟಿ



ಸಂಗೀತಗಾರರೊಂದಿಗೆ ಪಂಡಿತ್‌ಜೀ



ಬಿ.ಕೆ.ಎಸ್. ವರ್ಮರವರು ರಚಿಸಿದ ವೃಕ್ಷ ಪಿತಾಮಹ
(ಸುಧಾಕರರ ಚಿತ್ರ)

